ಮನೋಹರ ಗ್ರಂಥಮಾಲೆಯ ಮೂರನೆಯ ಕುಸುಮ.

# ತ್ರಿಪುರ ದಹನ

ಮಂ. ಅ. ದೊರೆಸ್ವಾಮಿ ಐಯ್ಯಂಗಾರ್ಯ
ಎಂ. ಎ. ಬಿ. ಎಲ್. ಮೈಸೂರು

ಡಿಸೆಂಬರ ೧೯೩೩] [ಬೆಲೆ ೧೨ ಆಣೆಗಳು

ಮುದ್ರಕರು:
**ಬಳವಂತ ನಾರಾಯಣ ಬಾಗಲವಾಡಿ**
ಮೋಹನ ಮುದ್ರಣಾಲಯ,
ಧಾರವಾಡ

ಸಂಪಾದಕರು:
**ಬೆಟಗೇರಿ ಕೃಷ್ಣಶರ್ಮ**
**ಜಿ. ಬಿ. ಜೋಶಿ**

ಪ್ರಕಾಶಕರು:
**ಗೋವಿಂದ ವೆಂಕಟೇಶ ಚುಳಕಿ**
ಮನೋಹರ ಗ್ರಂಥಮಾಲಾ ಕಾರ್ಯಾಲಯ,
ದೇಸಾಯಿ ಓಣಿ ಧಾರವಾಡ

# ಪರಿವಿಡಿ

# ತ್ರಿಪುರದಹನ

## ಬಿನ್ನಹ

### ೧. ಗ್ರಂಥಾಶಯ

ಈ ಗ್ರಂಥವು ನಾಟಕವಲ್ಲ, ಕಥೆಯಲ್ಲ, ಪ್ರಬಂಧವಲ್ಲ, ಶಾಸ್ತ್ರೋಪನ್ಯಾಸವಲ್ಲ, ತತ್ತ್ವಪ್ರಕರಣವಲ್ಲ, ಇತಿಹಾಸವಿಮರ್ಶೆಯಲ್ಲ, ಮತೋಪದೇಶವಲ್ಲ. ಇದು ಅವುಗಳೆಲ್ಲದರ ಕಲಸುಮೇಲೋಗರ. ಹಳೆಯ ಪುರಾಣಕಥೆಯಲ್ಲಿ ಹೊಸ ಅಭಿಪ್ರಾಯಗಳನ್ನು ಸಂವಾದರೂಪದಿಂದ ಉದ್ಧರಿಸಬೇಕೆಂಬ ಪ್ರಯತ್ನಕ್ಕೆ ಇದು ಫಲವಾಗಿದೆ. ಗ್ರಂಥವು ಮುಖ್ಯವಾಗಿ ವಿಚಾರಪರರನ್ನು ಉದ್ದೇಶಿಸಿ ಬರೆಯಲ್ಪಟ್ಟಿದೆ. ಈ ಬಿನ್ನಹವು ಲೇಖಕನ ಆಶಯವನ್ನು ಸೂಚಿಸುವುದು. ಸಹೃದಯರು ಬಿನ್ನಹಕ್ಕೆ ಮೊದಲು ಒಂದು ಸಲವೂ ಅನಂತರ ಒಂದು ಸಲವೂ ಕಥೆಯನ್ನು ಓದಬೇಕೆಂದು ಗ್ರಂಥಕರ್ತನು ಆಶಿಸುತ್ತಾನೆ.

### ೨. ಕಥಾಮೂಲ

ತ್ರಿಪುರದಹನದ ಕಥೆಯು ಬಹು ಸಣ್ಣದಾದ ವಿಷಯವು. ಕಥೆಯನ್ನು ಹತ್ತು ಪಂಕ್ತಿಗಳಲ್ಲಿ ಹೇಳಿ ಮುಗಿಸಬಹುದು. ಅದರಲ್ಲಿ ಕಾವ್ಯಸ್ವಾರಸ್ಯವೇನೂ ಇಲ್ಲ. ಪ್ರಾಚೀನರು ಅದರಲ್ಲಿ ಯಾವ ರಹಸ್ಯಾರ್ಥವನ್ನೂ ನಿರೂಪಿಸಿಲ್ಲ.

ಗ್ರಂಥದ ಕಥಾಮೂಲವನ್ನು ತಿಳಿಯಲು ಕಷ್ಟವೇನೂ ಇಲ್ಲ. ಕೇವಲ ತನ್ನ ಆಶಯವನ್ನು ಸ್ಪಷ್ಟಪಡಿಸುವ ಸಲುವಾಗಿ, ಗ್ರಂಥಕರ್ತನು

ಕಥಾಮೂಲ, ಕಥಾರಚನೆ, ಕಥಾಗೂಢಾರ್ಥಗಳನ್ನು ಕುರಿತು ಕೆಲವು ಸೂಚನೆಗಳನ್ನು ಇಲ್ಲಿ ನಿರೂಪಿಸಲು ಬಯಸುತ್ತೇನೆ.

ಪುರಾಣಗಳಲ್ಲಿ ಸಾಧಾರಣವಾಗಿ ದೊರೆಯುವ ತ್ರಿಪುರದಹನದ ಕಥೆಯಲ್ಲಿ, ಶಿವನು ಆ ಕಾಲದಲ್ಲಿ ಪಾಶುಪತಮತವನ್ನು ಸ್ಥಾಪಿಸಿದ್ದೂ, ಹರಿಯು ವೃಷಭಾವತಾರದಿಂದ ವಿಶ್ವರಥವನ್ನು ಎತ್ತಿದ್ದೂ, ಸುರಭಿಯವತಾರದಿಂದ ಅಮೃತವಾಪಿಯನ್ನು ಬತ್ತಿಸಿದ್ದೂ ಕಂಡುಬರುವುದಿಲ್ಲ. ಇವು ಕುಮಾರವ್ಯಾಸನ ಕರ್ಣಪರ್ವದಲ್ಲಿ ದೊರೆಯುತ್ತವೆ. ಪಾರ್ವತಿಯು ತ್ರಿಪುರಸುಂದರೀ ಸ್ವರೂಪವು ಶಾಕ್ತತಂತ್ರಗಳಲ್ಲಿ ವಿವೃತವಾಗಿದೆ. ಅವಳು ಅಸುರನಗರಿಯಲ್ಲಿ ವಾಸಿಸಿದ್ದೂ ಹರಿಯು ಅಶ್ವತ್ಥನಾರಾಯಣನಾಗಿ ಅಸುರಸ್ತ್ರೀಯರ ಸತೀತ್ವವನ್ನು ಹಾಳುಮಾಡಿದ್ದೂ ದಂತಕಥೆಗಳಲ್ಲಿ ದೊರೆಯುತ್ತವೆ. ಪುರಾಣಗಳಲ್ಲಿ ತ್ರಿಪುರನಾಶನಕ್ಕಾಗಿ ಹರಿಯು ಬೌದ್ಧಾವತಾರ ಮಾಡಿದನೆಂದು ಮಾತ್ರ ಹೇಳಿದೆ. ಹ್ಲಾದನೆಂಬ ದೈತ್ಯನು ದೇವತೆಗಳನ್ನು ಸೋಲಿಸಿದಾಗ, ವಿಷ್ಣುವು ತನ್ನ ಮಾಯೆಯನ್ನು ಮಹಾಮಾಯನೆಂಬ ಪುರುಷನನ್ನಾಗಿ ಮಾಡಿ ಕಳುಹಿಸಿ, ಅವರ ಧರ್ಮಬುದ್ಧಿಯನ್ನು ಕೆಡಿಸಿ, ನಗ್ನಧರ್ಮ (=ದಿಗಂಬರ ಜೈನಮತ?) ವನ್ನು ಉಪದೇಶಿಸಿದನೆಂದು ವಿಷ್ಣುಪುರಾಣ ( ತೃತಿಯಾಂಶ ಕಡೆಯ ಅಧ್ಯಾಯ ) ದಲ್ಲಿ ಹೇಳಿದೆ. ಅಮೃತಾಪಹರಣಕ್ಕಾಗಿ ಹರಿಯು ಮೋಹಿನಿಯಾಗಿ ಅವತರಿಸಿ, ಅಸುರರನ್ನು ವಂಚಿಸಿದ ಕಥೆ ಪ್ರಸಿದ್ಧವೇ ಆಗಿದೆ. ಅಸುರರ ದೇಹವನ್ನು ದಂಡಿಸದೆ ಬುದ್ಧಿಯನ್ನು ಕೆಡಿಸುವ ಸಲುವಾಗಿ ಹುಟ್ಟಿರುವ ಈ ಮೂರು ಹರಿಯ ಅವತಾರಕಥೆಗಳನ್ನೂ ಈ ಗ್ರಂಥದಲ್ಲಿ ಸಂಗ್ರಹಿಸಿದೆ. ತ್ರಿಪುರ ದೈತ್ಯರು ನಾಶರಾಗದೆ ಅಧೋಲೋಕಗಳಿಗೆ ಕಳುಹಿಸಲ್ಪಟ್ಟ ಅಂಶವು ಪುರಾಣಗಳಲ್ಲಿ ದೊರೆಯುತ್ತದೆ.

ಮೂಲಕಥೆಗೆ ಉಪಷ್ಟಂಭಕವಾಗಿ ಅನೇಕ ವಿಚಾರಗಳನ್ನು ಪುರಾಣಕಥಾವಳಿಯಿಂದ ಸಮಯೋಚಿತವಾಗಿ ಸಂಗ್ರಹಿಸಿದೆ. ಪ್ರಥಮ ಚಿತ್ರದಲ್ಲಿ ಕವಿಯು ನಿರೂಪಿಸತಕ್ಕ ಹರಿಯ ವೃತ್ತಾಂತವು, ಪುರಾಣಗಳಲ್ಲಿ ದೊರೆಯುತ್ತದೆ. ನಾಲ್ಕು ಮತ್ತು ಐದನೆಯ ಚಿತ್ರಗಳಲ್ಲಿ ಬರತಕ್ಕ ದೇವಾಸುರರ ವೃತ್ತಾಂತವನ್ನು ವೇದ ಮತ್ತು ಪುರಾಣಗಳೆರಡರಿಂದಲೂ

ಆರಿಸಲಾಗಿದೆ. ಚಿತ್ರಗುಪ್ತನು ಐದನೆಯ ಚಿತ್ರದಲ್ಲಿ ಹೇಳಿರುವ ಭೃಗುವಿನ ಕಥಾಂಶಗಳು ವೇದದಲ್ಲಿ ದೊರೆಯುತ್ತವೆ.[1] ಶಿವನು ದಕ್ಷಯಾಗದಲ್ಲಿ ಹರನನ್ನು ವಿರೋಧಿಸಿದ್ದು ವೈಷ್ಣವ- ಶೈವಪುರಾಣಗಳೆರಡರಲ್ಲೂ ದೊರೆಯುವುದು. ಶಿವನು ದಾನವರ ದೈವನೆಂಬ ಮಾತು ಕೂರ್ಮಪುರಾಣದಲ್ಲಿ (ಅ. ೭೭) ಬಂದಿದೆ. ಶುಕ್ರನು ಇಂದ್ರಾಗ್ನಿಗಳ ಮಿತ್ರನೆಂಬ ಅಂಶವು ಋಗ್ವೇದದಲ್ಲೂ (VIII. 23 17, V. 29. 9, I. 121 12, V. 34. 2.)[2] ಶಿವಭಕ್ತನೆಂಬ ಅಂಶವು ಶಿವಮಹಾಪುರಾಣದಲ್ಲೂ (ರುದ್ರಸಂಹಿತೆ ಯುದ್ಧಖಂಡ)[3] ದೊರೆಯುತ್ತದೆ. ಋಗ್ವೇದದಲ್ಲಿ "ಶಿಶ್ನಾದೇವಾಃ" ಎಂದರೆ ಶಿಶ್ನವನ್ನೇ ದೇವರೆಂದು ಪೂಜಿಸತಕ್ಕವರನ್ನು ಇಂದ್ರನು ಸಂಹರಿಸಿದನೆಂದು ಹೇಳಿದೆ (X 99. 3); ಮತ್ತು ಅವರನ್ನು ಯಾಗದ ಸಮೀಪಕ್ಕೆಬಿಡಕೂಡದೆಂದು ಅವನು ಪ್ರಾರ್ಥಿಸಲ್ಪಟ್ಟಿದ್ದಾನೆ (VII.21.5) ಶಾಕ್ತರಲ್ಲಿ ವಾಮಪಂಥದವರು ಚಕ್ರಪೂಜೆಯಲ್ಲಿ ಯೋನಿಯನ್ನು ಪೂಜಿಸುವರು. ಹರಿಯು ದುರ್ಗೆಯ ಅಣ್ಣನೆಂದು ಜನಕಥೆ ಹೇಳುವುದಲ್ಲದೆ ಭಾಗವತವೂ ಹೇಳುವುದು.

ಏಳನೆಯ ಚಿತ್ರಕ್ಕೆ ಮಹಾಯಾನ ಬೌದ್ಧಮತದಿಂದ ಅನೇಕ ಅಂಶಗಳನ್ನು ಸಂಗ್ರಹಿಸಲಾಗಿದೆ. ಹೀನಯಾನದಲ್ಲಿ ನಿರ್ವಾಣವನ್ನು ಸಾಧಿಸತಕ್ಕ ಅರ್ಹಂತನೇ ಸರ್ವಶ್ರೇಷ್ಠನಾಗಿರುವನು. ಲೋಕಸೇವಾನಿರತನಾದ ಬೋಧಿಸತ್ವನು ಅರ್ಹಂತನಿಗಿಂತಲೂ ಶ್ರೇಷ್ಠನೆಂದು ಮಹಾಯಾನವು ಹೇಳುವುದು. ಸಾವಿರಜನ್ಮಗಳಲ್ಲಿ ಲೋಕಸೇವೆ ಮಾಡಿ, ಬೋಧಿಯನ್ನು ಪಡೆದು ಬುದ್ಧನಾಗಲು ಪ್ರಯತ್ನಿಸತಕ್ಕವನು ಬೋಧಿಸತ್ವನೆನ್ನಿಸುವನು. ಗೌತಮನು ೨೪ನೆಯ ಬುದ್ಧನಾಗಿರುವನು. ಅವನ ಮುಂದಣ ಬುದ್ಧನು ಈಗ ಬೋಧಿಸತ್ವನಾಗಿರುವ ಮೈತ್ರೇಯನಾಗಿರುವನು. ಮಹಾಯಾನವು ಸ್ವಲ್ಪದರಲ್ಲೇ ಬರಿಯ ಜ್ಞಾನವೈರಾಗ್ಯಗಳನ್ನು ಬಿಟ್ಟು,

೧. ಮೆಕ್ಡಾನೆಲ್— ವೈದಿಕ ಕಥಾವಳಿ, ೧೮೯೮ (ಇಂಗ್ಲಿಷು) ಪು. ೧೪೦.
ಮೆಕ್ಡಾನೆಲ್ ಮತ್ತು ಕೀತ್— ವೈದಿಕಾನುಕ್ರಮಣಿ ೧೯೧೨ (ಇಂ) II ಪು. ೧೯೯-೧೯

೨. ಮೆಕ್ಡಾನೆಲ್— ವೈ. ಕ. ಪು. ೧೪೭

೩. ರೋಮಾಂಡು ವೆಂಕಟರಾಮಶಾಸ್ತ್ರಿ ಕನ್ನಡ ಭಾಷಾಂತರ ೧೯೩೦ ಪು. ೨೨೨

ಭಕ್ತಿಯನ್ನೂ ಯೋಗವನ್ನೂ ಪರಿಗ್ರಹಿಸಿತು. ಜನರು ಬೋಧಿಸತ್ವನನ್ನೆ ದೇವರಂತೆ ಭಕ್ತಿಯಿಂದ ಪೂಜಿಸಲಾರಂಭಿಸಿದರು. ಮೈತ್ರೇಯನಿಗಿಂತಲೂ ಅಧಿಕ ಭಕ್ತಿವರದರಾದ ಅವಲೋಕಿತೇಶ್ವರ (–ಶಿವ) ಮಂಜುಶ್ರೀ (—ಬ್ರಹ್ಮ), ವಜ್ರಪಾಣಿ (—ಇಂದ್ರ) ಎಂಬ ಮೂವರು ಬೋಧಿಸತ್ವರ ಪೂಜೆಯು ಸರ್ವತ್ರ ಹರಡಿತು. ಜನರ ಉಪಾಸನಾಪ್ರವೃತ್ತಿಯು ಇವರಿಗಿಂತಲೂ ದೊಡ್ಡ ದೇವರನ್ನು ಬಯಸಿದ್ದರಿಂದ ಯೋಗದ ಸಹಾಯದಿಂದ ಧ್ಯಾನಲೋಕಗಳೂ ಧ್ಯಾನಿಬುದ್ಧರೂ ಕಲ್ಪಿತರಾದರು. ಈ ಮತದ ಪ್ರಕಾರ ಒಂದು ಬ್ರಹ್ಮಾಂಡ ಅಥವಾ ಚಕ್ರವಾಳದಲ್ಲಿ ಒಂದು ನರಕವೂ ನಾಲ್ಕು ಕಾಮಲೋಕಗಳೂ ೨೭ ಸ್ವರ್ಗಗಳೂ ಇರುವುವು. ಈ ಸ್ವರ್ಗಗಳಲ್ಲಿ ಮೊದಲನೆಯ ಆರು ಕಾಮಜೀವಿಗಳ ಲೋಕಗಳು, ಮಿಕ್ಕುವು ಧ್ಯಾನಲೋಕಗಳು, ಎಂದರೆ ಕಾಮನಾತಿರಿಕ್ತರಿಗೆ ಯೋಗಧ್ಯಾನದಿಂದ ಮಾತ್ರ ಲಭಿಸತಕ್ಕುವು. ಈ ಧ್ಯಾನಲೋಕಗಳಲ್ಲಿ ಕೊನೆಯ ನಾಲ್ಕು ಅರೂಪಲೋಕಗಳಾಗಿವೆ. ಭೂಲೋಕದಲ್ಲಿ ಅವತರಿಸತಕ್ಕ ಪ್ರತಿಯೊಬ್ಬ ಬುದ್ಧನಿಗೂ ಪ್ರತಿರೂಪನಾಗಿ ಒಬ್ಬ ಧ್ಯಾನಿಬುದ್ಧನು ಅರೂಪಧ್ಯಾನಲೋಕದಲ್ಲಿ ಇರುವನು. ಈ ಧ್ಯಾನಿಬುದ್ಧನನ್ನು ಯೋಗದಿಂದ ತಿಳಿದು ಭಜಿಸಬೇಕಾಗಿರುವುದು. ಪ್ರತಿಯೊಬ್ಬ ಧ್ಯಾನಿಬುದ್ಧನು ತನ್ನ ಪರಿಣಾಮದಿಂದ ಒಬ್ಬ ಧ್ಯಾನಿಬೋಧಿಸತ್ವನನ್ನು ಹುಟ್ಟಿಸುವನು. ಅಲ್ಲದೆ ಇವರ ಶಕ್ತಿಯು 'ತಾರಾದೇವಿ' ಎಂಬ ಹೆಸರಿನಿಂದ ರೂಪುಗೊಳ್ಳುವುದು. ಈ ವರ್ತಮಾನಕಲ್ಪದಲ್ಲಿ ಉಪಾಸ್ಯರಾಗಿರುವ ಪಂಚಬುದ್ಧರ ವಂಶಾವಳಿಯು ಹೀಗಿದೆ:—

| **ಬುದ್ಧ** | **ಧ್ಯಾನಿಬುದ್ಧ** | **ಧ್ಯಾನಿಬೋಧಿಸತ್ವ** | **ತಾರಾದೇವಿ** |
|---|---|---|---|
| ಕ್ರಕುಚ್ಛಂದ | ವೈರೋಚನ | ಸಮಂತಭದ್ರ | ವಜ್ರಧಾತ್ರಿ |
| ಕನಕಮುನಿ | ಅಕ್ಷೋಭ್ಯ | ವಜ್ರಪಾಣಿ | ಲೋಚನಾ |
| ಕಾಶ್ಯಪ | ರತ್ನಸಂಭವ | ರತ್ನಪಾಣಿ | ಮಾಮಕೀ |
| ಗೌತಮ | ಅಮಿತಾಭ | ಅವಲೋಕಿತೇಶ್ವರ | ಪಾಂಡರಾ |
| ಮೈತ್ರೇಯ | ಅಮೋಘಸಿದ್ಧ | ವಿಶ್ವಪಾಣಿ | ತಾರಾದೇವಿ |

ಧ್ಯಾನಿಬುದ್ಧನಿಂದಲೂ ಜನರು ತೃಪ್ತರಾಗದೆ, ಏಕಮೇವಾದ್ವಿತೀಯನಾದ

ದೇವರನ್ನು ಬಯಸಿದ್ದರಿಂದ, ನೇಪಾಳದಲ್ಲಿಯ ಐಶ್ವರಿಕರೆಂಬ ಮತಶಾಖೆಯವರು, ಧ್ಯಾನಿಬುದ್ಧರಾಗಿರುವ ಸಕಲರಿಗೂ ಮೂಲಸೃಷ್ಟಿಕರ್ತನಾದ ಆದಿಬುದ್ಧನೆಂಬ ಭಗವಂತನನ್ನು ಕಲ್ಪಿಸಿದರು. ಪ್ರಜ್ಞಾಪಾರಮಿತಳೇ ಈತನ ಪತ್ನಿಯು. ನೇಪಾಳದಲ್ಲಿ ಆದಿಬುದ್ಧನು ಮುಖ್ಯದೇವರಾಗಿರುವನು. ತದುತ್ತರದೇಶಗಳಲ್ಲಿ ಅಮಿತಾಭನೂ ಅವಲೋಕಿತೇಶ್ವರನೂ ಮುಖ್ಯರಾಗಿರುವರು.[೪] ಅವಲೋಕಿತನು ಮೈತ್ರೇಯನಾದ ಮೇಲೆ ಬುದ್ಧನಾಗತಕ್ಕವನು.

ವೈಷ್ಣವಮತವು ಬೌದ್ಧಮತದಿಂದ ಅನೇಕ ಅಂಶಗಳನ್ನು ಪರಿಗ್ರಹಿಸಿ, ಬುದ್ಧನನ್ನು ವಿಷ್ಣುವಿನ ಅವತಾರವನ್ನಾಗಿ ಮಾಡಿದರೂ ಬೌದ್ಧಮತವು ಮಾತ್ರ ವೈಷ್ಣವಮತದಿಂದ ವಿಶೇಷವಾಗಿ ಯಾವುದನ್ನೂ ಪರಿಗ್ರಹಿಸಿದಂತೆಯಿಲ್ಲ. ಆದರೆ ಮಹಾಯಾನ ಬೌದ್ಧಮತವು ಶೈವ–ಶಾಕ್ತಮತಗಳೊಡನೆ ಕೆಲವುಕಡೆ ಬಹಳ ವಿಶೇಷವಾಗಿ ಬೆರೆತು ಹೋಯಿತು. ಈ ಸಂಯೋಗವನ್ನು ಅಸಂಗನೆಂಬ ಆಚಾರ್ಯನು (ಕ್ರಿ. ಶ. ಐದನೆಯ ಶತಮಾನ?) ತನ್ನ 'ಯೋಗಾಚಾರಭೂಮಿಶಾಸ್ತ್ರ' ವೆಂಬ ಗ್ರಂಥದ ಮೂಲಕ ಪ್ರಚಾರವಾಗಿ ಕಲ್ಪಿಸಿದನು.[೫] ಈ ಸಂಯೋಗಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಅಮೋಘಸಿದ್ಧನು ಶಿವನಂತೆ ತ್ರಿನೇತ್ರನು. ಅವಲೋಕಿತನಿಗೆ ಹಲವು ರೂಪಗಳುಂಟು. ಆತನ ಆರ್ಯಪಾಲರೂಪವು ಏಕಾದಶರುದ್ರಾತ್ಮಕವಾಗಿ ಏಕಾದಶಶಿರಸ್ಕವಾಗಿದೆ. ನೀಲಕಂಠಾವಲೋಕಿತೇಶ್ವರನು ಶಿವನಂತೆ ನೀಲಕಂಠನು. ತ್ರೈಲೋಕ್ಯವಶಂಕರ ಲೋಕೇಶ್ವರನು ತ್ರಿನೇತ್ರನು. ಮಾಯಾಜಾಲ ಕ್ರಮಾರ್ಯಾವಲೋಕಿತೇಶ್ವರನು ಶಿವನಂತೆ ಪಂಚಮುಖನಾಗಿ, ತ್ರಿನೇತ್ರನಾಗಿ, ಧನುರ್ಧಾರಿಯಾಗಿ, ಕಪಾಲಹಸ್ತನಾಗಿರುವನು. ಹಾಲಾಹಲಲೋಕೇಶ್ವರನು ಶಿವನಂತೆ ಸರ್ಪಾವೃತತ್ರಿಶೂಲಧರನಾಗಿ, ವ್ಯಾಘ್ರಚರ್ಮಧರನಾಗಿ ತ್ರಿಶಿರನಾಗಿ, ತ್ರಿನೇತ್ರನಾಗಿ, ಎಡತೊಡೆಯಮೇಲೆ ಶಕ್ತಿಯನ್ನು ಕುಳ್ಳಿರಿಸಿಕೊಂಡಿರುವನು.[೬]

೪. ಮೋನಿಯರ್ ವಿಲಿಯಮ್ಸ್— ಬುದ್ಧಮತ ೧೮೮೯ (ಇಂ) ಪು. ೧೯೫–೨೦೩

೫. ರೈಸ್ ಡೇವಿಡ್ಸ್ — ಬುದ್ಧಮತ (ಇಂ), ೧೮೯೬–೫, ಪು. ೨೦೬

೬. ಆಲಿಸ್ ಗೆಟ್ಟಿ— ಉತ್ತರಬುದ್ಧಮತದ ದೇವತೆಗಳು (ಇಂ), ೧೯೧೪, ಪು. ೬೪–೬೬

ತಾರಾದೇವಿಯ ರೂಪಗಳು ಕಾಳಿಯ ರೂಪಗಳನ್ನು ಹೋಲುತ್ತವೆ. ನೇಪಾಳದ ಸ್ವಯಂಭೂನಾಥನ ದೇವಾಲಯದಲ್ಲಿ ಆ ದೇವರು, ಬೌದ್ಧರಿಗೆ ಆದಿನಾಥನೂ ಶೈವರಿಗೆ ಶಿವನೂ ಆಗಿರುವನು.[೭] ಕಾಂಫಟ ಶೈವಯೋಗಮತಪ್ರವರ್ತಕನಾದ ಗೋರಕ್ಷನಾಥನು ನೇಪಾಳದಲ್ಲಿ ಬೋಧಿಸತ್ವಾವತಾರನೆಂದು ಭಾವಿಸಲ್ಪಟ್ಟಿದ್ದಾನೆ.[೮] 'ನಿರ್ವಾಣಂ' ಎಂಬುದು ಶಿವನ ಹೆಸರೆಂದು ಮಹಾಭಾರತವು ಹೇಳುವುದು.[೯] ಜಾವಾ ಮತ್ತು ಬಲಿದ್ವೀಪಗಳಲ್ಲಿ ಶಿವಬುದ್ಧಮತವು ಸರ್ವತ್ರ ಹರಡಿದ್ದಿತು. ಅಲ್ಲಿಯ ಹಲವು ಪ್ರಸಿದ್ಧ ರಾಜರುಗಳು ಶಿವಬುದ್ಧರೆಂದು ಕರೆಯಲ್ಪಟ್ಟಿರುವರು. ಜಾವಾದ ಸುಪ್ರಸಿದ್ಧವಾದ ಚಂಡಿ ಶಿಂಗಸರಿ (Tjandi Singasari) ದೇವಾಲಯವು ಶಿವಬುದ್ಧಾಲಯವೆಂದು ಕರೆಯಲ್ಪಟ್ಟಿದೆ. ಅಲ್ಲಿ ಬೌದ್ಧದೇವತೆಗಳ ಜತೆಗೆ ಲಿಂಗ, ನಂದಿ ಮೊದಲಾದ ಶೈವದೇವತಾವಿಗ್ರಹಗಳು ಇವೆ. ಜಾವಾ, ಕಾಂಬೋಜ, ಚಂಪ, ಬಲಿ ಈ ದೇಶಗಳಲ್ಲಿ ಬೌದ್ಧಮತವು ಲಿಂಗಪೂಜೆಯನ್ನು ಪರಿಗ್ರಹಿಸಿದ್ದಿತು.[೧೦]

## ೩. ಕಥಾರಚನೆ

ಕಥಾರಚನೆಯಲ್ಲಿ ಮೂಲಕಥೆಯು ವಿಸ್ತಾರವಾಗಿ ತಿದ್ದುಪಡಿಯಾಗಿದೆಯೆಂಬುದು ಸ್ಪಷ್ಟವಾಗಿದೆ. (೧) ಸ್ವವ್ಯಾಖ್ಯಾನ. ಉದಾಹರಣೆ:- ವಿಶ್ವವೇ ವಿಷ್ಣು (ಪ್ರಥಮಚಿತ್ರ). ಈ ಬಗೆಯ ಭಾವನೆಯು ಈಗ 'ಮೆಕೆನ್ಸಿ' ಮೊದಲಾದ ಪಾಶ್ಚಾತ್ಯ ತತ್ವವಿದರಲ್ಲಿ ಪ್ರಚಾರದಲ್ಲಿದೆ. ವಿಷ್ಣುಸಹಸ್ರನಾಮದಲ್ಲಿ ಇದು ಎರಡು ಮೂರು ವಿಧವಾಗಿ ನಡೆದಿದೆ. ಹರಿಯ ಮೊದಲನೆಯ ಹೆಸರು ವಿಶ್ವವಾಗಿದೆ. ಅದರ ಅವಲಂಬನೆಯಿಂದ ಈ ವ್ಯಾಖ್ಯಾನವನ್ನು ಬರೆದಿದೆ. ಹರಿಯ ಶರಾವತಾರವನ್ನು ಮೂರು ಭಾಗ ಮಾಡಿಕೊಂಡು, ಅಗ್ರವನ್ನು ಕೃಷ್ಣರೂ ಬುಡವನ್ನು ಮುಸಲ್-

೭. ಮಾಸಯರ ನಿಲಿಯವ್ನ್--- ಅದೇ, ಪು. ೨೯೭

೮. ಅದೇ, ಪು. ೧೯೪

೯. ಅದೇ, ಪು. ೧೩೮

೧೦. ಎಲಿಯಟ್-ಹಿಂದೂ ಮತ ಮತ್ತು ಬುದ್ಧಮತ, (೨೦), ೧೯೨೧, III ಪು ೧೦೭, ೧೧೯, ೧೬೯, ೧೮೬

ಮಾನರೂ ಮಧ್ಯವನ್ನು ಲಕುಲೀಶಪಾಶುಪತರೂ ಪೂಜಿಸುವರೆಂದು
ಹೇಳಿರುವ ಅಂಶವು ಸ್ವವ್ಯಾಖ್ಯಾನಕ್ಕೆ ಮತ್ತೊಂದು ಉದಾಹರಣೆ
ಯಾಗಿದೆ. ಮಯುಸಂತೆ ಕೃಸ್ತನು ಬಹುಜಾತಿಯವನು. ಶಿವನು ಕಾಯಾ
ರೋಹಣ ( ಬರೋಡದ ಕಾರ್ವಾನ್ ) ಎಂಬ ಸ್ಥಳದಲ್ಲಿ ಲಕುಲೀಶನಾಗಿ
ಅವತರಿಸಿ,ಪಾಶುಪತಮತವನ್ನು ಸ್ಥಾಪಿಸಿದನೆಂದು ವಾಯು (i. 23. 209)
ಮತ್ತು ಲಿಂಗ ( ಅ. 24 ) ಪುರಾಣಗಳು ತಿಳಿಸುವುವು. ( ೨ ) ಆಧುನಿ
ಕಾಭಿಪ್ರಾಯ ನಿರೂಪಣ. ಮುಂದೆ ತಿಳಿಸುವ ಅನೇಕ ಆಧುನಿಕ ತಾತ್ವಿ
ಕಾಭಿಪ್ರಾಯಗಳನ್ನೂ ಐತಿಹಾಸಿಕಾರ್ಥಗಳನ್ನೂ ಈ ಕಥಾವಸರದಲ್ಲಿ
ನಿರೂಪಿಸಲು, ಕಥೆಯನ್ನು ವಿಸ್ತಾರವಾಗಿ ತಿದ್ದುಪಡಿ ಮಾಡಿ ಬರೆದಿದೆ.
(೩) ಸ್ವಾಭಾವಿಕ ಕ್ರಮಸಂಯೋಜನೆ (Naturalisation). ಈ ಕಥೆಯಲ್ಲಿ
ಬರತಕ್ಕ ವ್ಯಕ್ತಿಗಳೂ ಸಂಗತಿಗಳೂ ಅಮಾನುಷಿಕ ಜಾತಿಗೆ ಸೇರಿವೆ. ಆದರೆ
ಪ್ರಕೃತಿನಿಯಮಕ್ಕೂ ಮನುಷ್ಯಸ್ವಭಾವಕ್ಕೂ ವಿರುದ್ಧವಿಲ್ಲದಂತೆ, ಕಥಾ
ವ್ಯಾಪಾರವು ನಡೆಯುವಂತೆ ಈ ಗ್ರಂಥದಲ್ಲಿ ಸಂಯೋಜನೆ ಮಾಡಿದೆ.
ಉದಾಹರಣೆಗಳು:— ತ್ರಿಪುರವ್ಯವಸ್ಥೆ, ಅಸುರರ ಭೂಲೋಕದ ರಾಜ್ಯ
ಭಾರಕ್ರಮ, ಹರಿ-ಹರ-ಭೃಗು ಮೊದಲಾದವರ ಪರಿಣಾಮಚರಿತ್ರೆ, ವಿಶ್ವ
ರಥರಚನೆ, ನಿರ್ವಾಣದೀಕ್ಷೆ. ಅಮೃತವಾಪಿಯ ಶೋಷಣೆ, ತ್ರಿಪುರ
ಸಂಗಮ, ತ್ರಿಪುರಕ್ಕೆ ಹರಿಯ ಪ್ರವೇಶ, ಅಲ್ಲಿ ಹರಿಯ ಕಾರ್ಯಕ್ರಮ,
ಇತ್ಯಾದಿ. ಏಕಾಸ್ತ್ರದಿಂದ ತ್ರಿಪುರವು ನಾಶವಾಯಿತೆಂದರೆ ಸಕ್ರಮ
ವಾಗಿ, ನಿಧಾನವಾಗಿ ಮಾರ್ಪಾಡು ಕಲ್ಪಿತವಾಗದೆ, ಬಲಾತ್ಕಾರದಿಂದ
ಒಂದೇ ಪಟ್ಟಿಗೆ ವಿಪ್ಲವಮಾರ್ಗ (Revolutionary Method) ದಿಂದ
ಕಲ್ಪಿತವಾಯಿತೆಂದು ಸೂಚಿಸಿದೆ (೪) ಪೂರ್ವೋಕ್ತ ಕ್ರಮಗಳ ಸಂಕ
ಲನ. ಉದಾ:—ಬ್ರಹ್ಮನ ಪುಷ್ಕರಾವತಾರ ( ಸಪ್ತಮಚಿತ್ರ). ಬ್ರಹ್ಮನು
'ಪುಷ್ಕರ' ಎಂದರೆ ಜಲರೂಪನಾಗಿ 'ಅವತಾರ' ಎಂದರೆ ಕೆಳಕ್ಕೆ ಇಳಿದು,
ಭೂಲೋಕದಲ್ಲಿ ನೆಲಸಿದನೆಂದು ಇಲ್ಲಿ ಸೂಚಿಸಿದೆ. ರಾಜಸ್ಥಾನದಲ್ಲಿ ಅಜ
ಮೇರುವಿಗೆ ಸಮೀಪದಲ್ಲಿರುವ ಪುಷ್ಕರಕ್ಷೇತ್ರದಲ್ಲಿ ಒಂದುಕಡೆ ಮಾತ್ರ
ಈಗ ಬ್ರಹ್ಮನಿಗೆ ಪೂಜೆ ನಡೆಯುತ್ತಿದೆ. ನೈಮಿಷದಲ್ಲಿ ಅರಣ್ಯವೇ
ದೇವರಾಗಿರುವಂತೆ ಪುಷ್ಕರಕ್ಷೇತ್ರದಲ್ಲಿ ಜಲವೇ ದೇವರೆಂದು

ಐತಿಹ್ಯವಿದೆ. ಈ ಐತಿಹ್ಯವನ್ನು ಸ್ವವ್ಯಾಖ್ಯಾನದಿಂದ ತಿದ್ದುಪಡಿ ಮಾಡಿ ಉಪಯೋಗಿಸಿದೆ.

ಅತಿಮಾನುಷಿಕ (Supar human) ವ್ಯಾಪಾರಗಳು ನಡೆಯಲು ಅಸಾಧ್ಯವಾದ ಕಲಿಯುಗದಂತಹ ಕಾಲಪರಿಸ್ಥಿತಿಯಲ್ಲಿ, ಕಥೆಯು ನಡೆಯುವ ಸಂದರ್ಭದಲ್ಲಿ ಮಾತ್ರವೇ ಮೇಲೆ ಹೇಳಿದ ನಾಲ್ಕು ಕ್ರಮಗಳೂ ಉಪಯೋಗಕ್ಕೆ ಬರುವುವು. ತ್ರಿಪುರದಹನದ ಕಥೆಯು ಎಷ್ಟುಮಾತ್ರವೂ ಐತಿಹಾಸಿಕವೃತ್ತಾಂತವಲ್ಲವಾದ್ದರಿಂದ, ಅದಕ್ಕೆ ಕಾಲನಿರ್ಣಯವು ಸಾಧ್ಯವಿಲ್ಲ. ಕರ್ಣಪರ್ವದಲ್ಲಿ ಈ ಕಥೆ ಬರುವುದರಿಂದ ಅದು ಕಲಿಯುಗಕ್ಕೆ ಹಿಂದಣದು ಎಂದು ಹೇಳಬಹುದು. ಆದರೆ ಈ ಕಥೆಯು ಬೌದ್ಧಾವತಾರ ಕಾಲದಲ್ಲಿ ನಡೆದದ್ದೆಂದು ಸಕಲ ಪುರಾಣಗಳೂ ಹೇಳುವುವು. ಬೌದ್ಧಾವತಾರವು ಕೃಷ್ಣಾವತಾರಕ್ಕೆ ಈಚಿನದೆಂಬುದು ಸರ್ವಸಮ್ಮತವಾಗಿದೆ. ಕೃಷ್ಣನಿರ್ಯಾಣಾನಂತರ ಕಲಿಯುಗವು ಆರಂಭಿಸುವುದು. ಆದ್ದರಿಂದ ಈ ಕಥೆಯನ್ನು ಕಲಿಯುಗಕ್ಕೆ ಸೇರಿಸಲು ಅವಕಾಶವುಂಟು. ಇದನ್ನು ಮೂಲವಾಗಿಟ್ಟುಕೊಂಡು, ಈ ಕಲಿಯುಗಧರ್ಮಕ್ಕನುಸಾರವಾಗಿ ಕಥೆ ನಡೆಯುವಂತೆ ಸಂಯೋಜಿಸಲಾಗಿದೆ.

## ೪. ಕಾವ್ಯೋದ್ದೇಶ

ಆಧುನಿಕಾಭಿಪ್ರಾಯ ನಿರೂಪಣೆಯು ಒಂದು ಮುಖ್ಯ ಕಾವ್ಯೋದ್ದೇಶವೆಂದು ಮೊದಲೇ ಹೇಳಿದೆ. ಶ್ರೇಯಸ್ಸು, ಮೋಕ್ಷ, ನಾರಾಯಣ, ಪುರುಷಾರ್ಥ, ಶಕ್ತಿಸಿದ್ಧಿ, ಪಶು, ನಗ್ನ, ಅಸುರ ಮೊದಲಾದ ಪದಗಳಿಂದ ವಾಚ್ಯಗಳಾದ ಅಂಶಗಳನ್ನು ಕುರಿತು ಹುಟ್ಟಿರುವ ನಾನಾರ್ಥಗಳನ್ನು ಸಮಯೋಚಿತವಾಗಿ ಸೂಚಿಸಿ, ವಿಮರ್ಶೆಮಾಡುವುದೇ ಈ ನಿರೂಪಣೆಗೆ ಲಕ್ಷ್ಯವಾಗಿದೆ. ಈ ಅಂಶಗಳನ್ನು ಕುರಿತು ಕೆಲವು ಆಧುನಿಕ ಸಿದ್ಧಾಂತಗಳನ್ನು ವಿವರಿಸಿದೆ. ಅಲ್ಲದೆ ಆ ಸಿದ್ಧಾಂತಗಳ ಜಾಡೆಯಲ್ಲಿ ಭಾರತ ಇತಿಹಾಸವನ್ನೂ ಹಿಂದೂಧರ್ಮದ ಇತಿಹಾಸವನ್ನೂ ಪರೀಕ್ಷಿಸಿದೆ.

ಈ ವಿಚಾರಗಳನ್ನು ಕುರಿತ ನಾನಾರ್ಥಸೂಚನೆಯನ್ನು ಇಲ್ಲಿ ಒಂದುಗೂಡಿಸಿ ಎರಡು ಮಾತು ಹೇಳಬಹುದು.

## ಶ್ರೇಯಸ್ಸು

ಶ್ರೇಯಸ್ಸು ವೈಯಕ್ತಿಕ, ಸಾಮುದಾಯಿಕ ಎಂದು ಎರಡು ವಿಧ. ವೈಯಕ್ತಿಕವು ಕ್ಷಣಿಕ, ಶಾಶ್ವತ ಎಂದು ಎರಡು ಬಗೆ. ಶಾಶ್ವತ ವೈಯಕ್ತಿಕ ಶ್ರೇಯಸ್ಸು ಸಾಮುದಾಯಿಕ ಶ್ರೇಯಸ್ಸಿನಿಂದ ಮಾತ್ರ ಸಿದ್ಧಿಸುವುದೆಂದು ವಿವರಿಸಿದೆ.

## ಮೋಕ್ಷ

ಅಮರತ್ವ ಮತ್ತು ಮೋಕ್ಷಗಳ ಸ್ವರೂಪವನ್ನು ಎರಡನೆಯ ಚಿತ್ರವು ಸಾಂಗೋಪಾಂಗವಾಗಿ ವಿವರಿಸಿದೆ. ಅಮರತ್ವವೇ ಮೋಕ್ಷವು. ಮೋಕ್ಷವು ವೈಯಕ್ತಿಕ, ಸಾಮುದಾಯಿಕ ಎಂದು ಎರಡು ವಿಧ. ವೈಯಕ್ತಿಕ ಮೋಕ್ಷವು ಆತ್ಮಿಕ,ದೈಹಿಕ ಎಂದು ಎರಡು ಜಾತಿ.ಆತ್ಮಿಕಮೋಕ್ಷವು ಮೃಗರೂಪೀ ಎಂದೂ ಪಾಷಾಣರೂಪೀ ಎಂದೂ ಎರಡು ಬಗೆ. ದೈಹಿಕ ಮೋಕ್ಷವು ಕೀರ್ತಿಜನ್ಮರೂಪವುಳ್ಳದ್ದು. ಕೀರ್ತಿಶರೀರವು ಲೋಕೋಪಕಾರದಿಂದ ಹುಟ್ಟುವುದು. ಸಾಮುದಾಯಿಕ ಮೋಕ್ಷವೆಂದರೆ ಸರ್ವೋತ್ಕೃಷ್ಟವಾದ ಸಮಾಜರಚನೆ ಎಂಬರ್ಥ. ಅದು ವ್ಯಕ್ತಿಯ ದೇಹಾತ್ಮಗಳೆರಡಕ್ಕೂ ಸಮವಾಗಿ ಏಕಕಾಲದಲ್ಲಿ ಮೋಕ್ಷವನ್ನು ಕಲ್ಪಿಸುವುದು. ಈ ಆದರ್ಶಸಮಾಜವೇ ನಾರಾಯಣನೆನ್ನಿಸುವುದು.

## ನಾರಾಯಣ

ಶ್ರೀವೈಷ್ಣವರು ನಾರಾಯಣನಿಗೆ ಪರ, ವ್ಯೂಹ, ವಿಭವ, ಅರ್ಚಾ, ಅಂತರ್ಯಾಮಿ ಎಂದು ಐದು ಸ್ವರೂಪಗಳನ್ನು ನಿರ್ಮಿಸಿರುವರು. ಪರ (Transcendental) ಸ್ವರೂಪವು ವಿಶ್ವಕ್ಕೆ ಪರವಾಗಿ, ವಿಶ್ವಾತೀತವಾಗಿ, ಅವಾಙ್ಮಾನಸಗೋಚರವಾಗಿದೆ. ಈ ಸ್ವರೂಪವನ್ನು ಭಜಿಸುವುದು ಅಸಾಧ್ಯ. 'ವ್ಯೂಹ' ಎಂದರೆ ನಾರಾಯಣನು ಚತುರ್ವ್ಯೂಹನಾಗಿ ಜಗತ್ತಿನ ಸೃಷ್ಟಿ–ಸ್ಥಿತಿ–ಲಯಕಾರ್ಯಗಳನ್ನು ಮಾಡುವ ಸ್ವರೂಪವು. ಈ ರೂಪದಲ್ಲಿ ಇವನು 'ವಿಶ್ವಪತಿ' ಎನ್ನಿಸುವನು. 'ವಿಭವ' ಎಂದರೆ ವಿಶ್ವವ್ಯವಸ್ಥೆಯ ಪರಿಪಾಲನೆಗಾಗಿ ದೇವರು ದೇವ-ಮಾನವ–ಮೃಗಾದಿರೂಪದಿಂದ ಅವತಾರ ಮಾಡುವ ಸ್ವರೂಪವು. ನಾರಾಯಣನು ದೇವರೂಪದಲ್ಲಿ

ಅಸುರಪ್ರಭು, ಉಪೇಂದ್ರ, ಅಸುರಾರಿ ಮೊದಲಾದ ಅವತಾರಗಳನ್ನೂ ಮಾನವರೂಪದಲ್ಲಿ ರಾಮಕೃಷ್ಣಾದ್ಯವತಾರಗಳನ್ನೂ ಪಶುರೂಪದಲ್ಲಿ ಮತ್ಸ್ಯಕೂರ್ಮಾದಿ ಅವತಾರಗಳನ್ನೂ ಎತ್ತಿರುವನು. 'ಅರ್ಚಾ' ಎಂದರೆ ವಿಗ್ರಹರೂಪ ಎಂದರ್ಥ. 'ಅಂತರ್ಯಾಮಿ' ಎಂದರೆ ಚೇತನಾಚೇತನ ಸಕಲದ್ರವ್ಯದಲ್ಲೂ ವ್ಯಾಪಿಸಿ ಅಂತರಾತ್ಮನಾಗಿರುವ ಸ್ವರೂಪವು. ಈ ಗ್ರಂಥದಲ್ಲಿ ಮೊದಲನೆಯ ನಾಲ್ಕು ರೂಪಗಳಿಗಿಂತಲೂ ಅಂತರ್ಯಾಮಿ ಸ್ವರೂಪವೇ ಶ್ರೇಷ್ಠವೆಂದೂ ಅದರಲ್ಲೂ ಮಾನವ ಸಮಾಜಾಂತರ್ಗತ ಸ್ವರೂಪವೇ ನಮಗೆ ಉಪಾದೇಯವಾದುದೆಂದೂ ವಾದಿಸಿದೆ.

## ಪುರುಷಾರ್ಥ

ಪುರುಷಾರ್ಥವು ವೈಯಕ್ತಿಕ, ಸಾಮುದಾಯಿಕ ಎಂದು ಎರಡು ವಿಧ. ವೈಯಕ್ತಿಕ ಪುರುಷಾರ್ಥವು ಧರ್ಮಾರ್ಥ, ಕಾಮ, ಮೋಕ್ಷರೂಪವಾಗಿದೆ. ಸಾಮುದಾಯಿಕ ಪುರುಷಾರ್ಥವು 'ರಾಜನೀತಿ' ಎನ್ನಿಸುವುದು. ಪುರುಷಾರ್ಥವನ್ನು ಸಾಧಿಸಲು ಕರ್ಮ, ಜ್ಞಾನ, ಭಕ್ತಿ, ಮಂತ್ರ, ಅಭಿಚಾರ, ರಾಜಯೋಗ, ವಿಜ್ಞಾನ ಮೊದಲಾದ ಹಲವು ಸಾಧನಾಮಾರ್ಗಗಳುಂಟು. ಈ ಸಾಧನೆಗಳು ವಿದ್ಯೆಯನ್ನು ಅವಲಂಬಿಸಿ ಕೆಲಸಮಾಡುವುವು. ನಮ್ಮವರು ಸಕಲ ವಿದ್ಯೆಗಳನ್ನೂ ಆನ್ವೀಕ್ಷಕೀ (=ತತ್ತ್ವಶಾಸ್ತ್ರ), ತ್ರಯೀ (=ವೇದ), ವಾರ್ತಾ (=ಸಂಪತ್ಸಾಧನಶಾಸ್ತ್ರ), ದಂಡನೀತಿ ಎಂದು ನಾಲ್ಕು ಪಂಗಡವಾಗಿ ವಿಭಾಗಿಸುವರು. ಪುರುಷಾರ್ಥ, ಸಾಧನಾಮಾರ್ಗ, ವಿದ್ಯಾವಿಭಾಗ ಇವುಗಳಿಗೆ ಇರತಕ್ಕ ಪರಸ್ಪರ ಸಂಬಂಧ ವಿಚಾರದಲ್ಲಿ ಹತ್ತಾರು ಮತಗಳು ಹುಟ್ಟಿವೆ. ಕೌಟಿಲೀಯ ಅರ್ಥಶಾಸ್ತ್ರದ ಪ್ರಾರಂಭದಲ್ಲಿ, ವಿದ್ಯಾವಿಭಾಗಗಳನ್ನು ಕುರಿತು ಹುಟ್ಟಿರುವ ಮತಗಳು ನಿರೂಪಿತವಾಗಿವೆ. ಈ ನಾಲ್ಕು ವಿಭಾಗಗಳನ್ನೂ ಸಮಾನವಾಗಿ ಒಪ್ಪಿಕೊಳ್ಳುವುದು ದೇವಮತವೆಂದು ನಮ್ಮ ಕಥೆಯಲ್ಲಿ ನಿರೂಪಿಸಿದೆ. ಮಾನವಪಕ್ಷದವರು ಆನ್ವೀಕ್ಷಕಿಯನ್ನು ನಿರಾಕರಿಸುವರು. ಇದರಿಂದ ಇವರಲ್ಲಿ ವೇದಕ್ಕೂ ಕರ್ಮಕಾಂಡಕ್ಕೂ ಧರ್ಮಕ್ಕೂ ಪ್ರಾಮುಖ್ಯತೆ ಹೆಚ್ಚು. ರಾಷ್ಟ್ರವು ಜೀವಿಸಬೇಕೆಂದು ನಮ್ಮ ಕಥೆಯಲ್ಲಿ ವೇದಋಷಿ ಮೇಧಾತಿಥಿಯು ವಾದಿಸುವನು. ಮನುಸ್ಮೃತಿಗೆ (ಮತ್ತೊಬ್ಬ) ಮೇಧಾತಿಥಿಯು

ಆದಿವ್ಯಾಖ್ಯಾತೃವಾಗಿರುವನು. ಬಾರ್ಹಸ್ಪತ್ಯರು ಆನ್ವೀಕ್ಷಿಕೀ-ತ್ರಯಿಗಳೆರಡನ್ನೂ ಒಪ್ಪದೆ ನಾಸ್ತಿಕರಾಗಿರುವರು. ಅರ್ಥಬಲ, ರಾಜಬಲಗಳೆರಡನ್ನೂ ಸಮಾನವಾಗಿ ರೂಢಿಸಿ ಸುಖಿಸಬೇಕೆಂಬುದೇ ಇವರ ಆಶಯವು. ಶುಕ್ರಮತದವರು ವಾರ್ತಾವರ್ಗವನ್ನೂ ಬಿಟ್ಟು, ದಂಡನೀತಿಯೊಂದನ್ನೇ ಇಟ್ಟುಕೊಂಡು, ಅರ್ಥಪುರುಷಾರ್ಥದಲ್ಲಿ ರಾಜಕೀಯ ಕೀರ್ತಿ ಉಚ್ಛ್ರಾಯಗಳೇ ಪರಮಾರ್ಥಗಳೆಂದು ನಿರೂಪಿಸುವರು. ಕೌಟಿಲ್ಯನಾಮಕನಾದ ಚಾಣಕ್ಯನು ಶುಕ್ರಶಿಷ್ಯನೆಂದು ಮುದ್ರಾರಾಕ್ಷಸದಲ್ಲಿ ಹೇಳಿದೆ. ಈತನು ಹೇಳತಕ್ಕ ರಾಜನೀತಿಯು ಅತಿಕುಟಿಲವೂ ಅನೀತಿಪರವೂ ಅಧರ್ಮಮಯವೂ ಆಗಿದೆ. ಶುಕ್ರನು ಇಂತಹ ನೀತಿಬಲದಿಂದ ಅಸುರಸಾಮ್ರಾಜ್ಯವನ್ನು ಕಟ್ಟಿದನು. ಕೌಟಿಲ್ಯನ ಅರ್ಥಶಾಸ್ತ್ರವನ್ನೂ ರಾಜನೀತಿಯನ್ನೂ ಬೌದ್ಧರು ತಮ್ಮ ಗ್ರಂಥಗಳಲ್ಲಿ ಬಹುಧಾ ದೂಷಿಸಿ ಖಂಡಿಸಿರುವರು. ನಮ್ಮ ಕಥೆಯಲ್ಲೂ ಶುಕ್ರನ ರಾಜನೀತಿಯು ಬೌದ್ಧಮತದ ವಿರೋಧದಿಂದ ಖಿಲವಾಗುವುದು.

ಪುರುಷಾರ್ಥಗಳಲ್ಲಿ ಕಾಮವು ದೊಡ್ಡದೆಂದು ವಾತ್ಸ್ಯಾಯನನೂ ಮೋಹಿನಿಯೂ ಕಮಲಲೋಚನನೂ ದೇವತೆಗಳೂ ಭಾವಿಸುವರು. ವಿದ್ಯಾವಿಶಿಷ್ಟವಾದ ಶೃಂಗಾರರತಿಯು ವಾತ್ಸ್ಯಾಯನನ ಲಕ್ಷ್ಯವು. ಸ್ವಚ್ಛಂದ ಪ್ರೇಮವು ಮೋಹಿನಿಗೆ ಲಕ್ಷ್ಯವು. ಪಶುಕಾಮೋಪಭೋಗವು ಮುಕ್ಕವರಿಗೆ ಲಕ್ಷ್ಯವು. ಧರ್ಮಪುರುಷಾರ್ಥಕ್ಕಾಗಿ ಮೇಧಾತಿಥಿಯು ಹೊಡೆದಾಡುವನು. ಈ ಪುರುಷಾರ್ಥಕ್ಕೆ ಯಜ್ಞಮತವೇ ಒಡಲಾಗಿದೆ. ಯಜ್ಞಮತಕ್ಕೆ ಅಗ್ನಿಪೂಜೆ, ಪಶುವಧೆ, ದೇವಕುಲೋಪಾಸನೆ, ತ್ರಯೀ-ಪುರಸ್ಕಾರ ಮೊದಲಾದುವು ಅಂಗಗಳು. ಈ ಮತಕ್ಕೆ ಅಸುರರು ವೈರಿಗಳು. ಪ್ರಾಚೀನ ಅಸುರರು ಧರ್ಮಕ್ಕೆ ಯಜ್ಞದಾತೆಯೇ ಮತ್ತೊಂದು ಅಂಗವಾದ ತಪಸ್ಸನ್ನು ಅವಲಂಬಿಸಿ, ಯಜ್ಞಮತವನ್ನು ವಿರೋಧಿಸುತ್ತಿದ್ದರು. ತ್ರಿಪುರದೈತ್ಯರು ಧರ್ಮದ ಪ್ರಾಕಾರವನ್ನೇ ಬಿಟ್ಟು ಹೊರಕ್ಕೆ ಬಂದು, ಬ್ರಹ್ಮೋಪದೇಶದಿಂದ ಜ್ಞಾನವನ್ನೂ ಶುಕ್ರೋಪದೇಶದಿಂದ ವಿಜ್ಞಾನವನ್ನೂ ಕೈಹಿಡಿದು, ಯಜ್ಞಮತವನ್ನು ಎದುರಿಸಿದರು. ಅರ್ಥಪುರುಷಾರ್ಥವನ್ನು ಬೃಹಸ್ಪತಿ, ಶುಕ್ರ, ಅಥರ್ವ, ವಿದ್ಯುನ್ಮಾಲಿ

ಮೊದಲಾದವರು ಪ್ರತಿಪಾದಿಸುವರು. ಅಥರ್ವನು ಅಭಿಚಾರವೇ ಅದಕ್ಕೆ ಸಾಧನಾಮಾರ್ಗವೆಂದು ಸಾರುವನು. ರಾಜಯೋಗವೇ ಸಾಧನವೆಂದು ಅಗಸ್ತ್ಯನು ವಾದಿಸುವನು. ಗುರುವು ವಾರ್ತಾ-ದಂಡನೀತಿಗಳೇ ಸಾಧನವೆಂದು ಹೇಳುವನು. ಶುಕ್ರನು ದಂಡನೀತಿಯೊಂದೇ ಸಾಕೆನ್ನು ವನು. ಮಹಾಮಾಯನು 'ವಾರ್ತಾ' ಒಂದೇ ಮುಖ್ಯವೆನ್ನುವನು. ವಾರ್ತಾಮಾರ್ಗದಲ್ಲಿ ಬೇಟೆ, ಪಾಶುಪಾಲ್ಯ, ಕೃಷಿ, ವಾಣಿಜ್ಯ, ಕೈಗಾರಿಕೆ ಎಂಬ ಐದು ಅಂಗಗಳುಂಟು. ಗುರುವು ಮೊದಲನೆಯ ಮೂರನ್ನು ಮುಖ್ಯವಾಗಿ ಅಂಗೀಕರಿಸಿರುವನು. ಶುಕ್ರನು ಕೊನೆಯ ಎರಡನ್ನು ಮಾತ್ರ ಒಪ್ಪುವನು. ಮೋಕ್ಷಪುರುಷಾರ್ಥವೇ ದೊಡ್ಡ ದೆಂದು ನಾರದಾದಿಗಳು ವಾದಿಸುವರು. ಭಕ್ತಿಯು ಮೋಕ್ಷಕ್ಕೆ ಏಕ ಮಾತ್ರ ಸಾಧನವೆಂಬುದು ನಾರದಮತವು. ನಾರದರು ಹರಿಯ ಪಂಚ ಸ್ವರೂಪಗಳ ಭಜನೆಯನ್ನೂ ಒಪ್ಪಿ, ವ್ಯೂಹ, ವಿಭವ ಅರ್ಚಾಸ್ವರೂಪ ಗಳಿಗೆ ಹೆಚ್ಚು ಗಮನಕೊಡುವರು. ಜರತ್ಕಾರುವು ಅಖಿಲಕಲ್ಯಾಣ ಗುಣಾಕರನಾದ ವಿಶ್ವಪ್ರಭುವನ್ನು ಭಜಿಸುವನು. ಭೃಗುವು ನರಸಮಾ ಜಾಂತರ್ಯಾಮಿಯಾದ ನಾರಾಯಣನನ್ನು ಮಾತ್ರ ಮರ್ಯಾದಿಸು ವನು. ನಂದೀಶ್ವರನು ಲಿಂಗಪೂಜೆಯನ್ನೂ ತ್ರಿಪುರಸುಂದರಿಯ ಶಕ್ತಿ ಪೂಜೆಯನ್ನೂ ವಿವರಿಸುವರು. ಬ್ರಹ್ಮನೂ ಸನತ್ಕುಮಾರನೂ ಬುದ್ಧನೂ ತಾರಕಾಕ್ಷನೂ ಜ್ಞಾನಮಾರ್ಗವನ್ನು ದೊಡ್ಡದೆನ್ನುವರು. ಜ್ಞಾನ ಮಾರ್ಗವು ಔಪನಿಷದಿಕ (Intuitonal), ನಾಸ್ತಿಕ (Critical), ದಾರ್ಶ ನಿಕ (Systematic) ಎಂದು ಮೂರು ವಿಧವಾಗಿದೆ. ಬ್ರಹ್ಮನೂ ಸನತ್ ಕ್ಕುಮಾರನೂ ಔಪನಿಷದಿಕ ಅಧ್ಯಾತ್ಮಮತವನ್ನು ನಿರೂಪಿಸುವರು. ಜನಕನಂತಿದ್ದ ತಾರಕಾಕ್ಷನು ಇದನ್ನು ಬಿಟ್ಟು, ಬುದ್ಧನ ನಾಸ್ತಿಕಶೂನ್ಯ ವಾದವನ್ನು ಪರಿಗ್ರಹಿಸಿ ಅಶೋಕನಂತಾದನು. ರಾಜಯೋಗವು ಅಗಸ್ತ್ಯ ನಿಂದ ನಿರೂಪಿತವಾಗಿದೆ.

ಪುರುಷಾರ್ಥ, ವಿದ್ಯೆ, ಸಾಧನಗಳನ್ನು ವೈಯಕ್ತಿಕದೃಷ್ಟಿಯಿಂದ ಪರಿಶೀಲಿಸಿದರೆ, ಮೇಲೆ ವಿವರಿಸಿದ ಮತಕಲಹಗಳೆಲ್ಲಾ ಹುಟ್ಟುವುವು. ಅವುಗಳನ್ನು ಸಾಮುದಾಯಿಕದೃಷ್ಟಿಯಿಂದ ನಿರ್ಧರಿಸಬೇಕೆಂಬುದು

ಆಧುನಿಕಪಕ್ಷವು. ಈ ಪಕ್ಷದವರಿಗೆ ಸತ್ಯ (Truth), ಸದ್ಗುಣ (Goodness), ಸೌಂದರ್ಯ (Beauty), ಪ್ರಯೋಜನ (Utility) ಎಂಬುವು ಪುರುಷಾರ್ಥಗಳಾಗಿವೆ; ಮಾನವೋತ್ಕರ್ಷ (Humanism) ವೇ ಧ್ಯೇಯವಾಗಿದೆ; ವಿಜ್ಞಾನಶಾಸ್ತ್ರ (Science) ವು ಸರ್ವಪ್ರಧಾನವಿದ್ಯೆಯಾಗಿದೆ. ಇತರ ಸಕಲವಿದ್ಯೆಗಳೂ ಇದರಲ್ಲಿ ಅಡಗಿ, ಇದರ ಅಂಗವಾಗಿ ಜೀವಿಸಬೇಕು. ವಿಜ್ಞಾನವೇ ಪುರುಷಾರ್ಥಸಿದ್ಧಿಗೂ ಸಾಧನಮಾರ್ಗವಾಗಿದೆ. ವಿಜ್ಞಾನವು ಹೇಳಿದಂತೆ ಕೇಳಿ ಆಚರಿಸತಕ್ಕವರು ಮಾತ್ರವೇ ಸತ್ಯಾದಿ ಪುರುಷಾರ್ಥಚತುಷ್ಟಯವನ್ನೂ ಮಾನವೋತ್ಕರ್ಷವನ್ನೂ ಮಾನುಷ ಸಮಾಜರೂಪೀ ನಾರಾಯಣನನ್ನೂ ಸಾಧಿಸಬಲ್ಲರು. ಈ ಮತವು ಕಥೆಯಲ್ಲಿ ಉದ್ದಕ್ಕೂ ಸೂಚಿತವಾಗಿದೆ. ಅಸುರರು ಈ ಮತದಲ್ಲಿ ಏಕದೇಶವನ್ನು ಮಾತ್ರ ಪರಿಗ್ರಹಿಸಿದ್ದರಿಂದ ಅಮರತ್ವವನ್ನು ಪಡೆಯಲಾರದೆ ನಷ್ಟರಾದರು. ದೇವತೆಗಳು ಸಹ ಹಾಗೆಯೇ ಮಾಡಲು ಬಯಸಿದ್ದರಿಂದ ಅವರ ವಿಜಯವೇ ಅವರಿಗೆ ಪತನರೂಪವಾಗಿ ಪರಿಣಮಿಸಿತು. ಶುಕ್ರನು ಶುದ್ಧವೈಜ್ಞಾನಿಕನಾಗಲು ಅಸಮರ್ಥನಾಗಿದ್ದನು.

## ಶಾಕ್ತಮತ

'ಶಕ್ತಿಸಿದ್ಧಿ' ಎಂದರೆ ಶಕ್ತಿಯನ್ನು ಬಯಸಿ ಸಾಧಿಸುವುದು ಎಂದರ್ಥ. ಇದು ವೈಯಕ್ತಿಕ, ಸಾಮುದಾಯಿಕ ಎಂದು ಎರಡು ವಿಧ. ವೈಯಕ್ತಿಕ ಶಕ್ತಿಸಿದ್ಧಿಯು ದೈಹಿಕ, ಮಾನಸಿಕ, ಆತ್ಮಿಕ ಎಂದು ಮೂರು ವಿಧ. ದೈಹಿಕಶಕ್ತಿಸಿದ್ಧಿಯನ್ನು ದೇವತೆಗಳು ಪಡೆದಿರುವರು. ರಸವಾದಿಗಳೆಂಬ ಒಂದು ಶೈವಸಂಪ್ರದಾಯದವರು ನಾನಾ ರಸಪ್ರಕ್ರಿಯೆಗಳಿಂದ ದೇಹದ ಶಕ್ತಿಗಳನ್ನೂ ಆಯುಸ್ಸನ್ನೂ ಅತ್ಯಧಿಕವಾಗಿ ಹೆಚ್ಚಿಸಬೇಕೆಂದು ಉದ್ಯಮಿಸಿದ್ದರು. ಚೀಣದಲ್ಲಿ ಲಯೂತಸಿಯ ಅನುಯಾಯಿಗಳು ಇದೇ ಮಾರ್ಗವನ್ನು ಅವಲಂಬಿಸಿದರು. ಮಾನಸಿಕ ಶಕ್ತಿಸಿದ್ಧಿಯು ಮಾನುಷಿಕ ಮತ್ತು ಅತಿಮಾನುಷಿಕ ಎಂದು ಎರಡು ವಿಧ. ಮಾನುಷಿಕ ಶಕ್ತಿಸಿದ್ಧಿಯನ್ನು ನಮ್ಮ ಕಥೆಯಲ್ಲಿ ಮಯನು ಪ್ರಥಮಚಿತ್ರದಲ್ಲಿ ನಿರೂಪಿಸಿರುವನು. ಈ ಕ್ರಮವು ಸಾಮುದಾಯಿಕ ಶಕ್ತಿಸಿದ್ಧಿಯಲ್ಲಿ ಲೀನವಾಗುವುದು. ಅತಿಮಾನುಷಿಕ ಶಕ್ತಿಸಿದ್ಧಿಯು ರಾಜಯೋಗ, ಅಭಿಚಾರ, ಮಾಯಾಬಲ,

ಮಂತ್ರವೀರ್ಯ ಮೊದಲಾದ ರೂಪಗಳಲ್ಲಿರುವುದು. ಆತ್ಮಿಕಶಕ್ತಿ ಸಿದ್ಧಿಯು ಧಾರ್ಮಿಕವೆಂದೂ ಮೋಕ್ಷಾರ್ಥಕವೆಂದೂ ಎರಡು ಜಾತಿಯಾಗಿದೆ. ಧಾರ್ಮಿಕಮಾರ್ಗಕ್ಕೆ ಧರ್ಮಸಾಧನೆಯಿಂದ ಮೀಮಾಂಸಕರು ಹೇಳತಕ್ಕ 'ಅಪೂರ್ವ' ಎಂಬ ಶಕ್ತಿವಿಶೇಷವನ್ನು ಹುಟ್ಟಿಸುವುದು ಲಕ್ಷ್ಯವಾಗಿದೆ. ಮೋಕ್ಷಪ್ರದವಾದ ಆತ್ಮಸಿದ್ಧಿಯು ಜ್ಞಾನ ಭಕ್ತಿಗಳ ಮೂಲಕ ಪಡೆಯುವುದು. ಭಕ್ತಿಕ್ರಮದಲ್ಲಿ ಭಗವತ್ಪ್ರಸಾದವೆಂಬ ಶಕ್ತಿಯು ಸಂಪಾದನೆಯು ಕೆಲವರಿಗೆ ಲಕ್ಷ್ಯವು. ಶಕ್ತಿಮೂರ್ತಿಯ ಉಪಾಸನೆಯೇ ಕೆಲವರಿಗೆ ಲಕ್ಷ್ಯವು. ಎರಡನೆಯ ಮತವು ಶಾಕ್ತಮತವಾಗಿದೆ.

ಸಾಮುದಾಯಿಕ ಶಕ್ತಿಸಿದ್ಧಿಯು ವಿಜ್ಞಾನದ ಆಸರೆಯಿಂದ ವ್ಯವಸ್ಥಾಬಲವನ್ನು ಅನುಸರಿಸಿ ಉಂಟಾಗುವುದು. ಈ ವ್ಯವಸ್ಥಾಬಲಕ್ಕೆ ಬ್ರಹ್ಮಬಲ, ಕ್ಷಾತ್ರಬಲ, ವೈಶ್ಯಬಲ ಇವು ಅಂಗವಾಗಿವೆ. ಈ ಬಲಗಳ ವ್ಯವಸ್ಥೆಯು ಜಾತಿಕ್ರಮ (Caste System) ಮತ್ತು ಶ್ರೇಣಿಕ್ರಮ (Class System) ಎಂದು ಎರಡು ವಿಧವಾಗಿದೆ. ಜಾತಿಕ್ರಮವು ಈ ಬಲಗಳನ್ನು ಬೇರೆಬೇರೆಯಾದ ಸ್ಥಿರಪಂಗಡಗಳಾಗಿ ವಿಭಾಗಿಸುವುದು. ಹಿಂದೂಸಮಾಜವು ಈ ರೀತಿ ರಚಿತವಾಗಿದೆ. ತ್ರಿಪುರಸಮಾಜವೂ ಇದೇ ಕ್ರಮದಲ್ಲಿದ್ದಿತೆಂದು ನಿರೂಪಿಸಲಾಗಿದೆ. ಶ್ರೇಣಿಕ್ರಮವು ಸಮಾಜದಲ್ಲಿ ಸ್ಥಿರವಿಭಾಗಗಳನ್ನು ಕಲ್ಪಿಸದೆ, ಒಟ್ಟು ಸಮಾಜವನ್ನು ಏಕವ್ಯವಸ್ಥೆಯಲ್ಲಿಟ್ಟು, ಅದರ ಉಪವಿಭಾಗಗಳಿಗೆ ಬ್ರಹ್ಮಾದಿ ಮೂರುಬಗೆಯ ಬಲಗಳನ್ನೂ ಒಟ್ಟಿಗೆ ಭಿನ್ನ ಪರಿಮಾಣದಲ್ಲಿ ಒದಗಿಸಿ ಕೊಡುವುದು. ಆಧುನಿಕ ಪಾಶ್ಚಾತ್ಯಸಮಾಜವು ಈ ಕ್ರಮದಲ್ಲಿ ರಚಿತವಾಗಿದೆ. ಈ ಸಮಾಜದ ಪ್ರತಿಯೊಂದು ಶ್ರೇಣಿಯೂ ಬ್ರಹ್ಮವೈಶ್ಯಾದಿ ಬಲಗಳನ್ನು ಒಟ್ಟಿಗೆ ಪಡೆದಿದೆ ಹಿಂದೂಸಮಾಜದ ವಿಭಾಗಗಳು ಈ ಬಲಗಳನ್ನು ಸಂಪೂರ್ಣವಾಗಿ ಬೇರೆಬೇರೆಯಾಗಿ ಪಡೆದಿವೆ. ಶ್ರೇಣಿಕ್ರಮವು ಏಕಶ್ರೇಣಿ, ದ್ವಿಶ್ರೇಣಿ ಮತ್ತು ಬಹುಶ್ರೇಣಿ ಎಂದು ಮೂರು ವಿಧವಾಗಿದೆ. ಬಹುಶ್ರೇಣಿಕ್ರಮದಲ್ಲಿ ಉತ್ತಮ, ಮಧ್ಯಮ, ನಿಮ್ನ, ದಾಸ ಎಂಬ ಶ್ರೇಣಿಗಳು ಇರಬಲ್ಲುವು. ದಾಸ್ಯಪದ್ಧತಿ ನಾಶವಾದರೆ, ದಾಸರು ನಿಮ್ನಕೋಟಿಯಲ್ಲಿ ಲೀನರಾಗುವರು. ಪರಸ್ಪರ ಘರ್ಷಣೆಯಿಂದ ಈ ಮೂರು ಶ್ರೇಣಿಗಳೂ

ಒಡೆದು, ಧನಿಕ (Bourgeiose) ಮತ್ತು ನಿರ್ಗತಿಕ (Proletariat) ಎಂಬ ಎರಡು ಶ್ರೇಣಿಗಳಾಗಿ ರೂಪುಗೊಳ್ಳುವುವು. ಇದು ದ್ವಿಶ್ರೇಣಿಕ್ರಮವು. ಈ ಎರಡು ಶ್ರೇಣಿಗಳು ಸಹ ಒಡೆದು ಸಮಾಜವು ಒಂದೇ ಶ್ರೇಣಿರೂಪವನ್ನು ಪಡೆಯಬಹುದು. ಈ ಏಕಶ್ರೇಣಿರೂಪವು ಧನಿಕಪ್ರಾಧಾನ್ಯ (Fascism) ಮತ್ತು ನಿರ್ಗತಿಕ ಪ್ರಾಧಾನ್ಯ ಎಂದು ಎರಡು ವಿಧವಾಗಿದೆ. ಮೊದಲನೆಯ ವಿಧವು ಈಗ ಇಟಲಿಯಲ್ಲಿ ಮುಸಲೋನಿಯಿಂದಲೂ ಜರ್ಮನಿಯಲ್ಲಿ ಹಿಟ್ಲರಿಂದಲೂ ಸ್ಥಾಪಿತವಾಗಿದೆ. ಎರಡನೆಯದು ಋಷ್ಯಕದೇಶದ 'ಬೋಲಷವಿಕ' ಮತವು. ಇವಿಷ್ಟೂ ಬ್ರಹ್ಮ-ಕ್ಷತ್ರ-ವೈಶ್ಯಬಲಗಳನ್ನವಸ್ಥೆಯಲ್ಲಿ ಹುಟ್ಟತಕ್ಕ ಪ್ರಭೇದಗಳಾಗಿವೆ. ಈ ಬಲಗಳ ಪರಸ್ಪರ ತಾರತಮ್ಯವು 'ಸಮ' ಮತ್ತು ವಿಷಮ ಎಂದು ಎರಡು ವಿಧವಾಗಿ ಇರಬಹುದು. ಈ ಬಲಗಳು ಸಮತಾರತಮ್ಯವಾಗಿ, ಏಕಶ್ರೇಣೀ ಸಮಾಜದಲ್ಲಿ ಸಿರ್ಧನಪ್ರಾಧಾನ್ಯಕ್ರಮದಲ್ಲಿ ವ್ಯವಸ್ಥೆಗೊಳ್ಳುವುದು ಸರ್ವೋತ್ಕೃಷ್ಟಸ್ಥಿತಿಯು. ವಿಷಮ ತಾರತಮ್ಯಸ್ಥಿತಿಯು ಒಂದೊಂದು ಬಲಕ್ಕೆ ವಿಪರೀತ ಪ್ರಾಧಾನ್ಯವನ್ನು ಕಲ್ಪಿಸಿ, ಮೂರು ವಿಧವಾಗಿ ಪ್ರವರ್ತಿಸುವುದು. ಹಿಂದೂ ಸಮಾಜವು ಬ್ರಹ್ಮಬಲವನ್ನೇ ಅನನ್ಯವಾಗಿ ಉಪಾಸಿಸುತ್ತ, ಮಿಕ್ಕ ಬಲಗಳನ್ನು ತೃಣೀಕರಿಸಿರುವುದು. ಆಧುನಿಕ ಅಮೆರಿಕಾ ಜನರು ವೈಶ್ಯಬಲದ ಉಪಾಸಕರು. ನಮ್ಮ ಕಥೆಯಲ್ಲಿ ಶುಕ್ರನು ಕ್ಷಾತ್ರಶಕ್ತಿಯ ಉಪಾಸಕನು. ಜರ್ಮನಿಯಲ್ಲಿ ಕಳೆದ ಶತಮಾನದಲ್ಲಿ 'ತ್ರೈತ್ಸಕೇ' 'ಬರ್ನ್‌ಹಾರ್ಡ' ಮೊದಲಾದವರು ಈ ಮತವನ್ನು ಸವಿಸ್ತಾರವಾಗಿ ಪ್ರತಿಪಾದಿಸಿರುವರು. ಹೀಗೆ ಶಾಕ್ತಮತವು ಅನಂತಪ್ರಭೇದಗಳುಳ್ಳದ್ದಾಗಿದೆ.

## ಪಶು

ಕಥೆಯಲ್ಲಿ ಉದ್ದಕ್ಕೂ ಪಶುವಿನ ಪ್ರಸ್ತಾಪ ಬಂದಿದೆ. ಕಥೆಯಲ್ಲಿ ಸ್ಪಷ್ಟವಾಗಿಯೂ ಗೂಢವಾಗಿಯೂ ಸೂಚಿತವಾಗಿರುವ 'ಪಶು' ಶಬ್ದದ ನಾನಾರ್ಥಗಳನ್ನು ಇಲ್ಲಿ ಸಂಗ್ರಹಮಾಡಬಹುದು. (೧) ಪಶುಪ್ರಕೃತಿ =ಆಸುರೀಪ್ರಕೃತಿ. ನಿರ್ಬುದ್ಧಿಯಾಗಿ, ವಿದ್ಯಾವಿಹೀನನಾಗಿ, ತಮೋಮಗ್ನನಾಗಿ, ದಸ್ಯು ಅವಸ್ಥೆಯಲ್ಲಿರುವ ಅಸುರನು ಪಶುಪ್ರಾಯನಾಗಿರುವನು. (ಚಿತ್ರ ೧). (೨) ಪಶ್ವಾವಸ್ಥೆ=ಮೃಗೀಯಮುಕ್ತಾವಸ್ಥೆ (ಚಿತ್ರ ೨).

(೩) ಪಶು=ಜೀತಪಶು, ದಾಸ.(ಚಿತ್ರ ೩). (೪) ಪಾಶವವೃತ್ತಿ=ಕಾಮುಕ ವೃತ್ತಿ (ಚಿತ್ರ ೪). (೫) ಪಶು=ಜ್ಞಾನಹೀನ. ದೇಹಾಭಿವೃದ್ಧಿ ಮಾರ್ಗಾವಲಂಬಿಗಳಾದ ದೇವತೆಗಳೂ ರಜೋಸ್ತಮೋತ್ತರಾದ ಅಸುರರೂ ವಿದ್ಯಾವಿಹೀನರಾಗಿ ಪಶುಗಳನ್ನು ಹೋಲುವರು. (ಅದೇ). (೬) ಭಕ್ತಿ=ಪಶು ಸುಲಭಮತ (ಅದೇ.) (೭) ಪಶುಮತ=ಪಶುಯಜ್ಞಮತ, ಪಶುಬಲಿ ಮತ. (ಅದೇ.) (೮) ಪಶುವಾರ್ತಾ=ಬೇಟೆ, ಪಾಶುಪಾಲ್ಯ, ಕೃಷಿ. (ಅದೇ.) (೯) ಪಶುಪೂಜೆ=ಪಶುಅವತಾರಪೂಜೆ (ಚಿತ್ರ ೫) (೧೦) ಪಶು ಪೂಜೆ=ಗೋಪೂಜೆ (ಚಿತ್ರ ೬) (೧೧) ಪಶುಮತ=ನಗ್ನಮತ (ಚಿತ್ರ ೫) (೧೨) ಪಶು=ಅವಿದ್ಯಾಪಾಶಬದ್ಧಾತ್ಮ (ಅದೇ). (೧೩) ಪಶುಪತಿ=ಅಗ್ನಿ, ಶಿವ (ಅದೇ.) (೧೪) ಪಶುಯೋಗ್ಯಪೂಜೆ=ಶಿಶ್ನಾರಾಧನೆ, ಲಿಂಗಪೂಜೆ, ಯೋನಿಪೂಜೆ (ಅದೇ.) (೧೫) ಪಶುಕಾಮಧರ್ಮ=ಸ್ವಚ್ಛಂದಪ್ರೇಮ ಮತ (ಚಿತ್ರ ೬.)

## ನಗ್ನ

ಗ್ರಂಥದಲ್ಲಿ ನಗ್ನಮತವೆಂಬುದು ನಾನಾರ್ಥದಲ್ಲಿ ಸೂಚಿತವಾಗಿದೆ. ನಗ್ನರು ಎಂದರೆ ಯಾರು? (೧) ಪಶುಗಳು ನಗ್ನ. (೨) ಆರ್ಹತರು (ದಿಗಂಬರ ಜೈನರು ನಗ್ನರು.) (೩) ಲಿಂಗಪೂಜಕಮತವೂ ಯೋನಿಪೂಜಕ ಮತವೂ ನಗ್ನಾರಾಧಕಮತಗಳು. (೪) ಭಸ್ಮಾಂಬರನಾದ ಶಿವಯೋಗಿಯು ನಗ್ನನು. (೫) ಅಶ್ವತ್ಥನಾರಾಯಣನ ನಿರ್ವಾಣದೀಕ್ಷೆಯು ನಗ್ನಮತವಾಗಿರುವುದು. (೬) ನಿರ್ಗತಿಕರು ನಗ್ನರು. ಕ್ರಿ. ಶ. ೧೭೮೯ರಲ್ಲಿ ಹುಟ್ಟಿದ ಫ್ರೆಂಚರಾಜ್ಯಕ್ರಾಂತಿ(French Revolution)ಯಲ್ಲಿ ಶ್ರೀಮಂತ ಶ್ರೇಣಿಯವರ ರಾಜ್ಯಾಧಿಕಾರವನ್ನು ಕೆಳಗಿನ ಶ್ರೇಣಿಗಳವರು ಅಪಹರಿಸಿದರು. ಆಗ ಈ ಶ್ರೀಮಂತರು ಈ ಕ್ರಾಂತಿಯು ಉಡುವುದಕ್ಕೆ ಬಟ್ಟೆಯಿಲ್ಲದ ನಿರ್ಗತಿಕರ ವಿಜೃಂಭಣೆ ಎಂಬ ಅರ್ಥದಲ್ಲಿ Sans Culottism=ಪಾಯಿಜಾಮೆ ವಿಹೀನರ ಮತ=ನಗ್ನಮತ ಎಂದು ಅದನ್ನು ಕರೆದರು. ನಮ್ಮ ಕಥೆಯಲ್ಲಿ ಮಹಾಮಾಯನೂ ಇದೇಜಾತಿಯ ನಗ್ನಮತವನ್ನು ಬೋಲಷೆವಿಕರಂತೆ ಮತ್ತೂ ಮುಂದುವರಿಸುವನು.

## ಅಸುರ

ಕಥೆಯಲ್ಲಿ ದೇವಾಸುರ ಮಾನವರ ಸ್ವರೂಪವನ್ನು ಅನೇಕಕಡೆಗೆ ಪ್ರಸ್ತಾಪಿಸಿದೆ. ಅಸುರರೆಂದರೆ ಯಾರು? (೧) ದೇವ-ಮಾನವ-ಪಶುಗಳಲ್ಲದವರು ಅಸುರರು. (೨) ದೈತ್ಯ, ದಾನವ, ದನುಜ, ರಾಕ್ಷಸ, ಪಿಶಾಚರೆಲ್ಲರೂ ಅಸುರರು. (೩) (೪) ಸುರರ ವೈರಿಗಳೆಲ್ಲರೂ ಅಸುರರು. (೫) ಸುರೆ, ವಾರುಣಿ, ಸೋಮ ಮೊದಲಾದ ಪಾನಗಳಿಗೆ ಅನರ್ಹರು ಅಸುರರು. (೬) ಅಸುರರು ಎಂದರೆ ಪೂಜ್ಯರು ಎಂದು ಮೊದಲು ಅರ್ಥವಿತ್ತು. ಋಗ್ವೇದದಲ್ಲಿ ದೇವಕೂಟದಲ್ಲಿ ಪ್ರಥಮತಃ ಸರ್ವಪ್ರಧಾನನಾಗಿದ್ದ ವರುಣನು ಅಸುರನೆಂದು ಬಹುಕಡೆ ಸಂಬೋಧಿಸಲ್ಪಟ್ಟಿರುವನು. ಹಾಗೆಯೇ ಅಗ್ನಿ (ಋ. ವೇ. vii 6 1), ಬೃಹಸ್ಪತಿ (ii 23 2), ಸವಿತೃ (iv. 53. 1) ಪೂಷನ್ (v 51. 11), ರುದ್ರ (ii. 1 6, v 42 11) ಮೊದಲಾದವರು ಸಹ ಅಸುರರೆಂದು ಗೌರವಪುರಸ್ಸರವಾಗಿ ಕರೆಯಲ್ಪಟ್ಟಿದ್ದಾರೆ. ದೇವತೆಗಳು ಅಸುರರಲ್ಲಿ ವಿಶ್ವಾಸವಿಟ್ಟಿದ್ದರೆಂದು ಋಗ್ವೇದವು ತಿಳಿಸುತ್ತದೆ. (x 151 3) ಅಸುರರೂ ತಚ್ಛಬ್ದವಾಚ್ಯರಾದ ವರುಣಾಗ್ನಿರುದ್ರಾದಿಗಳೂ ಮಾಯಾಶಕ್ತಿ (Magic) ಯಲ್ಲಿ ಪ್ರಸಿದ್ಧರಾಗಿದ್ದರು. ಆರ್ಯರ ಶತ್ರುಗಳು ಮಾಯಾಶಕ್ತಿಯನ್ನೇ ಮುಖ್ಯವಾಗಿ ಆಶ್ರಯಿಸಿ ಎದುರಿಸಿದ್ದರಿಂದ, ಆರ್ಯರಿಗೆ ಮಾಯಾಶಕ್ತಿಯಲ್ಲೂ ಅಸುರರಲ್ಲೂ ದ್ವೇಷ ಹುಟ್ಟಿತು.[೧೧] (೮.) ಈ ಮೂಲದಿಂದ ಅಸುರರು ಎಂದರೆ ಮಾಯಾವಿಗಳು ಎಂದು ಅರ್ಥ ಹುಟ್ಟಿತು. ಮಣಿ, ಮಂತ್ರ, ತಂತ್ರ, ಯಕ್ಷಿಣಿ, ಇಂದ್ರಜಾಲ, ಅಭಿಚಾರ ಮೊದಲಾದ ಮಾಯಾವಿದ್ಯೆಗಳಲ್ಲಿ ಅತಿನಿಪುಣರಾದ ಯಾತುಧಾನ(=ಮಾಟಗಾರ) ರಾಗಿದ್ದರು. ಈ ಮಾಯಾಸಿದ್ಧಿಗಾಗಿ ಅಸುರರು ಯಜ್ಞವನ್ನು ನಿರಾಕರಿಸಿ ತಪಸ್ಸನ್ನು ಆಶ್ರಯಿಸಿದರು. (೯) ಅಸುರರು ಪೂರ್ವದೇವರೆಂದು ಪ್ರಸಿದ್ಧರಾಗಿದ್ದರು. ಈಗಿನ ದೇವಕುಲಕ್ಕೆ ಮೊದಲು ಅಸುರರು ಅವರ ಪದವಿಯಲ್ಲಿ ಪ್ರತಿಷ್ಠಿತರಾಗಿದ್ದರು. ಇಂದ್ರ ಮುಖ್ಯರಾದ ದೇವತೆಗಳು ಈ ಪದವಿಯನ್ನು ಕಿತ್ತುಕೊಂಡು, ಆರ್ಯರಿಂದ ಪೂಜಿತರಾಗಿ ಶ್ರೇಷ್ಠರಾದರು. (೧೦) ಆರ್ಯರ ವೈರಿಗಳು

---

೧೧ ಎ. ಎ. ಮೆಕ್ಡಾನೆಲ್—ವೈದಿಕಕಥಾವಳಿ (ಇಂ) ೧೮೯೮ ಪು. ೧೫೬

ಅಸುರರು. ಮೆಸಪೊಟೇಮಿಯಾ ದೇಶದಲ್ಲಿ ಬಹಳ ಹಿಂದೆ ಶ್ಯಾಮಕ (=ಸೆಮಿತಿಕ) ಕುಲದವರು, ಅಷುರ=ಅಸುರ (Assyria) ಎಂಬ ರಾಜ್ಯವನ್ನು ಕಟ್ಟಿ, ಆರ್ಯಕುಲದವರನ್ನು ಸರ್ವದಾ ಪೀಡಿಸುತ್ತಿದ್ದರಾದ್ದರಿಂದ, ಆರ್ಯರು ತಮ್ಮ ಮತ್ತು ತಮ್ಮ ದೇವತೆಗಳ ಶತ್ರುಗಳನ್ನು, ಈ ಜನರ ಹೆಸರಾದ, 'ಅಸುರ' ಎಂಬ ಹೆಸರಿನಿಂದ ಕರೆದರೆಂದು ಕೆಲವು ಪಂಡಿತರು ಅಭಿಪ್ರಾಯ ಪಡುವರು. ಈ ಅಸುರಜನರ ಮತವು ಬರಿಯ ಮಾಟಗಾರ ಮತ (Shamanism) ವಾಗಿದ್ದಿತು. ಮುಂದೆ ಈ ಹೆಸರು ಆರ್ಯರ ಇತರ ಶತ್ರುಗಳಿಗೂ ದ್ರಾವಿಡರೇ ಮೊದಲಾದ ಅನಾರ್ಯರಿಗೂ ಕೊಡಲ್ಪಟ್ಟಿತು. (೧೧) ಹಾಗೆಯೇ ಆರ್ಯಮತ ವಿರೋಧಿಗಳೆಲ್ಲರೂ ಅಸುರರೆನ್ನಿಸಿದರು. (೧೨) ಅದೇ ರೀತಿ ಆರ್ಯರಲ್ಲಿ ಮೊದಲು ಸರ್ವಪ್ರಧಾನವಾಗಿದ್ದ ಕರ್ಮಮತವನ್ನು ವಿರೋಧಿಸಿದವರು ಹುಟ್ಟಿನಲ್ಲೂ ಸಂಸ್ಕೃತಿಯಲ್ಲೂ ಆರ್ಯರೇ ಆಗಿದ್ದರೂ ಅಸುರರೆನ್ನಿಸಿದರು ಜ್ಞಾನ, ವೈರಾಗ್ಯ, ತಪಸ್ಸುಗಳಿಗೆ ಪ್ರಾಮುಖ್ಯತೆಯನ್ನು ಕಲ್ಪಿಸಿದ ಜೈನ ಬೌದ್ಧ ಮತಗಳವರೂ ಭಕ್ತಿಪ್ರಧಾನವಾದ ಭಾಗವತ, ಪಾಂಚರಾತ್ರ, ಪಾಶುಪತ, ಕಾಪಾಲಿಕ, ಶಾಕ್ತಮತಗಳವರೂ ಅಸುರರೆಂದು ಕರೆಯಲ್ಪಟ್ಟಿರುವರು. "ಈ ಮತಗಳು ಆಸುರೀ ಪ್ರಕೃತಿಯ ಜನರ ಸಂಮೋಹನಾರ್ಥ ಹರಿಹರರಿಂದ ಕಲ್ಪಿತವಾಗಿವೆ" ಎಂದು ಪುರಾಣಗಳು ಪದೇ ಪದೇ ತಿಳಿಸುವುವು. ಹೀಗೆಯೇ ಮಾಯಾಶಕ್ತಿಸಿದ್ಧಿಗಾಗಿ ಮಂತ್ರಯೋಗ, ರಾಜಯೋಗ, ಅಭಿಚಾರ, ತಪಸ್ಸುಗಳನ್ನು ಅವಲಂಬಿಸತಕ್ಕವರೂ ಅಸುರರೆನ್ನಿಸಿದರು. ಜ್ಞಾನಮತವನ್ನು ಪ್ರತಿಪಾದಿಸತಕ್ಕ ಉಪನಿಷತ್ತುಗಳನ್ನು ಸಹ ಕರ್ಮಠರು ಬಹುಕಾಲ ವಿರೋಧಿಸಿದರು. ಜ್ಞಾನಮಾರ್ಗಾವಲಂಬಿಗಳು ಆನ್ವೀಕ್ಷಕಿಯನ್ನು ಪುರಸ್ಕರಿಸಿ, ತ್ರಯೀಶಾಸ್ತ್ರವೆಂದು ತಿರಸ್ಕರಿಸುತ್ತಿದ್ದರು. ಗೀತೆಯಲ್ಲಿ ಸಹ ಕೃಷ್ಣನು:—

"ತ್ರೈಗುಣ್ಯವಿಷಯಾ ವೇದಾಃ ನಿಸ್ತ್ರೈಗುಣ್ಯೋಭವಾರ್ಜುನ!"

'ವೇದಗಳು ತ್ರಿಗುಣಕ್ಕೆ ಅಧೀನವಾಗಿವೆ, ನೀನು ತ್ರಿಗುಣಾತೀತನಾಗಬೇಕು' ಎಂದು ಅರ್ಜುನನಿಗೆ ಉಪದೇಶಿಸಿರುವನು. ನಾಸ್ತಿಕರೆಲ್ಲರೂ ಅಸುರಪ್ರಕೃತಿಯವರೆಂದು ಪ್ರಸಿದ್ಧರಾಗಿರುವರು. ಮಹಾಭಾರತವು ಚಾರ್ವಾಕನನ್ನು ರಾಕ್ಷಸನನ್ನಾಗಿ ಮಾಡಿರುವುದು. (೧೩) ಕರ್ಮ-

ಮತದಲ್ಲಿ ನವ ಯಜ್ಞಮತವನ್ನು ವಿರೋಧಿಸಿದವರು ಅಸುರರೆಂದು ಸಂಬೋಧಿಸಲ್ಪಟ್ಟರು. ಯಜ್ಞಕ್ಕೆ ಅಗ್ನಿಪೂಜೆಯೂ ಪ್ರಾಣಿವಧೆಯೂ ಮುಖ್ಯಲಕ್ಷಣಗಳು. ಯಜ್ಞಕರ್ಮವನ್ನು ಬಿಟ್ಟು ತಪಸ್ಸೆಂಬ ಕರ್ಮವನ್ನು ಅಸುರರು ಕೈಹಿಡಿದರು. ಕೆಲವು ಔಪನಿಷದಿಕರು ಯಜ್ಞವೆಂಬ ಶಬ್ದವನ್ನು ಇಟ್ಟುಕೊಂಡು, ಜ್ಞಾನಪರವಾಗಿ ಅರ್ಥಮಾಡಿದರು; ಪಾಂಚರಾತ್ರಾದಿ ಆಗಮಿಕರು ಅದಕ್ಕೆ ಭಕ್ತಿಪರವಾಗಿ 'ಭಗವದಾರಾಧನೆ' ಎಂದು ಅರ್ಥಮಾಡಿದರು. ಯಜ್ಞಕರ್ಮಠರಿಗೆ ಈ ಜ್ಞಾನಯಜ್ಞ ಭಕ್ತಿಯಜ್ಞಗಳು ಆಸುರೀಪದ್ಧತಿಗಳಂತೆ ಕಾಣಿಸಿದುವು. ಅನಾರ್ಯರೂ ದ್ರಾವಿಡರೂ ಅಗ್ನಿಪೂಜೆಯನ್ನು ಬಿಟ್ಟು, ದೇವರನ್ನು ಅನಗ್ನಿವಿಧಾನದಿಂದ ಅರ್ಚಿಸಲಾರಂಭಿಸಿದರು. ಈ ಮೂಲದಿಂದ ಆಗಮ, ತಂತ್ರ, ಭಕ್ತಿಮತ ಇವು ಹುಟ್ಟಿದುವು. ಅಸುರರು ಅಗ್ನಿಕ್ರಿಯಾಹೀನರೆಂದೂ ಆರ್ಯರ ಯಜ್ಞಗಳಲ್ಲಿ ಅಗ್ನಿಯನ್ನು ಕೆಡಿಸಿ ಭಂಗಪಡಿಸುತ್ತಿದ್ದರೆಂದೂ ಪುರಾಣಗಳು ವಿವರಿಸುವುವು. ಮೂಲತಃ ದ್ರಾವಿಡರ ದೇವತೆಯಾದ ಶಿವನು ದಕ್ಷಯಾಗಧ್ವಂಸವನ್ನು ಮಾಡಿದನು. (೧೪) ಈಗಿನ ಪಾರಸಿಕರಿಗೆ ಮೂಲ ಪುರುಷರಾದ ಇರಾಣದ ಆರ್ಯರು ಅಸುರರಾಗಿದ್ದರು. ಇವರು ಭಾರತಾರ್ಯರ ಯಜ್ಞಮತವನ್ನೂ ಇಂದ್ರನನ್ನೂ ನಿರಾಕರಿಸಿ, ಸದ್ಗುಣಸಿದ್ಧಿಯನ್ನು ಉಪಲಕ್ಷಿಸಿ, ವರುಣನನ್ನು 'ಅಹುರಮಜ್ದ' (=ಅಸುರಮೇಧಾ) ಎಂಬ ಹೆಸರಿನಿಂದ ತಮ್ಮ ಪರಮಾತ್ಮನನ್ನಾಗಿ ಮಾಡಿಕೊಂಡು[೧೨] ಬೇರೆಯಾದರು. ಈ ಸ್ವಧರ್ಮವ್ಯಾಪಕಲಹದಿಂದ ದೇವಾಸುರ ಪದಗಳಿಗೆ ಇರಾಣರಲ್ಲಿ ತಲೆಕೆಳಗಾಗಿ ಅರ್ಥವುಂಟಾಗಿದೆ. ಅವರ 'ಅವೆಸ್ತಾ' ಗ್ರಂಥವು 'ಅಸುರ' ಪದವನ್ನು ವೇದದ 'ದೇವ' ಎಂಬ ಶಬ್ದಾರ್ಥದಲ್ಲೂ, 'ದೈವ' ಎಂಬುದನ್ನು ವೇದದ 'ರಾಕ್ಷಸ' ಎಂಬ ಶಬ್ದಾರ್ಥದಲ್ಲೂ ಉಪಯೋಗಿಸುವುದು. ಅವೆಸ್ತದಲ್ಲಿ ಇಂದ್ರನು ಅತಿ ನಿಕೃಷ್ಟನಾದ ಒಬ್ಬ ದೈವ (=ದೆವ್ವ) ನಾಗಿದ್ದಾನೆ. ಇರಾಣದಲ್ಲಿ ಜರತುಷ್ಟ್ರನೆಂಬ ಮಹಾ ಗುರುವು ಹುಟ್ಟಿ, ದೇವರು ಆಧ್ಯಾತ್ಮಿಕಸ್ವರೂಪನೂ ಸರ್ವಕಲ್ಯಾಣಗುಣಾಕರನೂ ಸದ್ಗುಣಸಿದ್ಧಿಪ್ರವರ್ತನೆಯ ಸೂತ್ರಧಾರನೂ ಆಗಿರಬೇಕೆಂದು ಉಪ-

---

೧೨. ಅವೆ:—ಪು. ೨೦

ದೇಶಿಸಿದನು. ಈತನನ್ನೇ ಹಿಂದೂ ಪುರಾಣಗಳು ಋಷಿಯ ವ್ಯಾಸನಾದ 'ಜರತ್ಕಾರು' ಎಂದು ನಿರೂಪಿಸಿರುವುದಾಗಿ ಒಂದು ಅಭಿಪ್ರಾಯವಿದೆ. ಇರಾಣರು ಯಜ್ಞಮತವನ್ನು ಬಿಟ್ಟರೂ ತಮ್ಮ ದೇವರನ್ನು ಅಗ್ನಿಯ ದ್ವಾರವಾಗಿ ಪೂಜಿಸುವ ಕ್ರಮವನ್ನು ಬಿಡಲಿಲ್ಲ.

ವೇದದಲ್ಲಿ – ಮುಖ್ಯವಾಗಿ ಋಗ್ವೇದಸಂಹಿತೆಯಲ್ಲಿ ದೇವತೆಗಳಿಗೆ ತ್ರಿಮೂರ್ತಿಗಳೆಂಬ ಪ್ರಭುಗಳಾರೂ ಉಕ್ತರಾಗಿಲ್ಲ. ವಿಷ್ಣುವೂ ರುದ್ರನೂ ಇಂದ್ರಾಧೀನರಾಗಿರುವರು. ಬ್ರಹ್ಮನ ಪ್ರಸ್ತಾಪವೇ ಬರುವುದಿಲ್ಲ. ನೀತಿ ಪರನೂ ಸದ್ಗುಣಪ್ರವರ್ತಕನೂ ಅಸುರನೂ ಆದ ವರುಣನು ಮೊದಲು ದೇವಕೂಟದಲ್ಲಿ ಸಂರಾಜನಾಗಿದ್ದನು. ಕ್ರಮವಾಗಿ ಅಗ್ನಿಯೂ ಸೋಮನೂ ಅವನನ್ನು ಹಿಂದಕ್ಕೆ ಹಾಕಿದರು. ಇಂದ್ರನು ಅವರನ್ನೂ ವಿರೋಧಿಸಿ, ವೃತ್ರಾದಿಗಳನ್ನು ಸಂಹರಿಸಿ ಮೆರೆದನು. ಯಜ್ಞದೇವತೆಯಾದ ಪ್ರಜಾಪತಿಯು ಇಂದ್ರನನ್ನೂ ದಾಟಿದನು. ಜ್ಞಾನಮತದಲ್ಲಿ ಉಪನಿಷತ್ಕಾರರು ಬ್ರಹ್ಮನನ್ನು ಪ್ರಜಾಪತಿಗಿಂತಲೂ ಮೇಲಕ್ಕೇರಿಸಿದರು. ಮುಂದಕ್ಕೆ ಭಕ್ತಿಮತದಲ್ಲಿ ಹರಿಹರರು ಇವರೆಲ್ಲರನ್ನೂ ಕೆಳಗೆ ಹಾಕಿದರು. ಪ್ರಜಾಪತಿಯು ಬ್ರಹ್ಮನಲ್ಲೂ ಹರಿಯಲ್ಲೂ ಲೀನನಾದನು. ಆದ್ದರಿಂದ ಕರ್ಮಮತದಲ್ಲಿ ಇಂದ್ರನೇ ಸರ್ವಪ್ರಧಾನನಾದನು.

## ( ಙ ) ತಾತ್ವಿಕಾಭಿಪ್ರಾಯಗಳು.

ಈ ಕಥೆಯ ದ್ವಾರ ನಿರೂಪಿತವಾಗತಕ್ಕ ತಾತ್ವಿಕಾಭಿಪ್ರಾಯಗಳಾವುವು? ( ೧ ) ಸದ್ಗುಣಾತ್ಮಕ ಮಾನವೋತ್ಕರ್ಷ (Ethical Humanism) ವು ನಮ್ಮ ಧ್ಯೇಯವಾಗಬೇಕು. ಅದಕ್ಕಾಗಿ ದೇವಾಸುರರು ಮಾನವರಲ್ಲಿ ಲೀನರಾಗಬೇಕು. ಸಕಲ ಶಾಸ್ತ್ರಗಳೂ ವಿದ್ಯೆಗಳೂ ಸಾಧನಗಳೂ ವಿಜ್ಞಾನದಲ್ಲಿ ಅಡಗಬೇಕು. ದೇವರು ಮಾನವಸಮಾಜಾಂತರ್ಯಾಮಿ ಸ್ವರೂಪನಾಗಿ ಪರಿಣಮಿಸಬೇಕು. ಸದ್ಗುಣಸಿದ್ಧಿಯು ಸರ್ವಪ್ರಧಾನವಾದ ಲಕ್ಷ್ಯವಾಗಬೇಕು. ವ್ಯಕ್ತಿಯು ಸಮಾಜಪುರುಷನ ಸಂಕಲ್ಪವನ್ನು ತನ್ನ ಸಂಕಲ್ಪವನ್ನಾಗಿ ಮಾಡಿಕೊಳ್ಳಬೇಕು. ಲೋಕಸೇವೆಯಿಂದ ಪರಮಾರ್ಥವನ್ನು ಸಾಧಿಸಲು ಬಯಸತಕ್ಕ ಬೋಧಿಸತ್ವನು ಆದರ್ಶಪುರುಷನಾಗಬೇಕು.

( ೨ ) ತೈತ್ತಿರೀಯವು ಹೇಳತಕ್ಕ 'ಮಾನುಷಂ' ಎಂದರೆ ಮಾನವ ಸಾಮುದಾಯಿಕಾಭಿವೃದ್ಧಿಯು ನಮ್ಮ ಮತಧರ್ಮವಾಗಬೇಕು. ಲೋಕಸೇವೆಯೇ ಈಶಸೇವೆಯೆನ್ನಿಸಬೇಕು. ಸಾಮುದಾಯಿಕಾಭಿವೃದ್ಧಿಯಿಂದ ಮಾತ್ರವೇ ಶ್ರೇಯಸ್ಸು ಸಿದ್ಧಿಸುವುದು. ಈ ಶ್ರೇಯಸ್ಸೇ ಉತ್ತಮ ನಾಗರಿಕತೆ (=ನಗರ ಸ್ಥಿತಿ) ಎನ್ನಿಸುವುದು. ನಾಗರಿಕತೆಯು ಉತ್ತಮವಾಗಿ ವರ್ಧಿಸಬೇಕಾದರೆ ದೃಢವಾದ ರಾಷ್ಟ್ರ, ಸ್ಥಿರವಾದ ವ್ಯವಸ್ಥಾಪಕಶಕ್ತಿ, ಮೇಲಾದ ಯಂತ್ರ ಶಕ್ತಿ, ಅಧಿಕವಾದ ವಿದ್ಯಾಶಕ್ತಿ, ಸಮೃದ್ಧಿಯಾದ ಅರ್ಥಶಕ್ತಿ ಇವೆಲ್ಲಾ ಬೇಕು. ಇವುಗಳನ್ನು ಸಂಪಾದಿಸಿ ಅಸುರರು ಏಳಿಗೆಯನ್ನು ಪಡೆದರು. ತ್ರಿಪುರವೆಂದೊಡನೆ ಅದ್ಭುತ ಯಂತ್ರವ್ಯವಸ್ಥೆ ಮತ್ತು ಉತ್ಕೃಷ್ಟ ನಾಗರಿಕತೆ ಇವುಗಳ ಬೋಧೆಯಾಗುವುದು. ಇದನ್ನು ಸೋಲಿಸುವುದಕ್ಕೆ ದೇವತೆಗಳು ಇನ್ನೂ ಉತ್ತಮವಾದ ನಾಗರಿಕತೆಯನ್ನು ಕಟ್ಟಬೇಕಾಯಿತು. ವಿಶ್ವರಥವು ತ್ರಿಪುರವ್ಯವಸ್ಥೆಯಲ್ಲಿದ್ದ ದೋಷಗಳನ್ನು ಪರಿಹರಿಸಿಕೊಂಡು ರಚಿತವಾಯಿತು. ( ೩ ) ಸಮಾಜದ ಆದರ್ಶವ್ಯವಸ್ಥೆ ಹೇಗಿರಬೇಕೆಂಬುದನ್ನು ಸೂಚಿಸುವುದಕ್ಕಾಗಿ, ಜಾತಿಶ್ರೇಣಿ ಮೊದಲಾದ ಕ್ರಮಗಳ ಗುಣಾವಗುಣಗಳನ್ನು ವಿಮರ್ಶಿಸಬೇಕು. ( ೪ ) ಅದೇ ರೀತಿ ಪುರುಷಾರ್ಥ, ಶ್ರೇಯಸ್ಸು, ವಿದ್ಯೆ, ಸಾಧನ, ಸಾಧಕಸ್ವರೂಪ ಇವುಗಳನ್ನು ಕುರಿತು ಹುಟ್ಟಿರುವ ಭಿನ್ನಮತಗಳನ್ನು ವಿಚಾರಮಾಡಬೇಕು.

೫. ಹಾಗೆಯೇ ಸಾಮುದಾಯಿಕ ಕ್ಷೀಣತೆಯ ಸ್ವರೂಪವನ್ನೂ ಪರಿಶೀಲಿಸಬೇಕು. ಅಸುರನಾಗರಿಕತೆಯು ವಿಶ್ವರಥನಿರ್ಮಾಣಮಾತ್ರದಿಂದ ನಾಶವಾಗಲಿಲ್ಲ. ಅಸುರನಾಗರಿಕತೆಯಲ್ಲಿ ಕೆಲವು ದೋಷಗಳು ಇದ್ದುವು. ವಿಷ್ಣುವು ಇವುಗಳನ್ನು ಹಿಂಬಾಲಿಸಿ, ಅಸುರರ ಸದ್ಗುಣಸಿದ್ಧಿಯನ್ನೂ ವಿದ್ಯಾಶಕ್ತಿಯನ್ನೂ ವ್ಯವಸ್ಥಾಶಕ್ತಿಯನ್ನೂ ಕೆಡಿಸಿದನು. ಒಳ್ಳೆಯದಾದ ಅಂಶವಿದ್ದರೂ ಅತಿಯಾಗಿ ವೃದ್ಧಿಯಾದರೆ ವಿಪರೀತಫಲವನ್ನು ಕೊಡುವುದು. ಅಧ್ಯಾತ್ಮಜಿಜ್ಞಾಸೆಯು ಅತಿಯಾಗಿ ಮುಂದುವರಿದರೆ ಶೂನ್ಯವಾದವು ಹುಟ್ಟುವುದು. ಕ್ಷಾತ್ರಜೀವನವು ಅತಿಯಾಗಿ ಪ್ರಬಲಿಸಿದರೆ, ಪುಷ್ಟವಾದ ಆಹಾರ ವಿಹಾರ ಭೋಗಗಳಿಗೆ ಸಿಕ್ಕಿ, ವಿಷಯ

ಲಂಪಟತೆಯಿಂದ ಭಂಗಪಡುವುದು. ವೈಶ್ಯಬುದ್ಧಿಯು ಅತಿಯಾದರೆ ಜೀತಗಾರರನ್ನು ಕಲ್ಲು ಮರಗಳಂತೆ ನಿಷ್ಕರುಣೆಯಿಂದ ದುಡಿಸುವುದು ಸಹಜ. ಆಗ ಅವರು ದಂಗೆಯೇಳುವುದು ಸಹಜ ದೇವತೆಗಳು ಕರ್ಮ-ವಿದ್ಯಾಭಿಮಾನಿಗಳಾಗಿದ್ದರು. ಅಸುರರು ಬ್ರಹ್ಮೋಪದೇಶದಿಂದ ಔಪನಿಷದಿಕರಾದರು. ಉಪನಿಷತ್ತಿನ ಸಂಪ್ರದಾಯದಿಂದಲೇ ಬೌದ್ಧಮತದ ಶೂನ್ಯವಾದವು ಹುಟ್ಟಿತು. ಈ ಮತವು ಸರ್ವಸಂನ್ಯಾಸ, ಅಹಿಂಸಾ ವ್ರತ, ಪರಮವೈರಾಗ್ಯಗಳನ್ನುಪದೇಶಿಸಿ ಸಮಾಜದ ವ್ಯವಸ್ಥೆಯನ್ನೇ ಸಡಿಲಿಸಿತು. ತಾರಕಾಕ್ಷನು ಯುದ್ಧವನ್ನೂ ದೇಹದಂಡನವನ್ನೂ ನಿಷೇಧಿಸಿ, ರಾಜ್ಯದ ಹಣವನ್ನು ದಾನಧರ್ಮ, ಸ್ತೂಪನಿರ್ಮಾಣಗಳಿಗೆ ಪೋಲು ಮಾಡಿದನು. ಇತಿಹಾಸದಲ್ಲಿ ಅಶೋಕನು ಹೀಗೆಯೇ ಆಚರಿಸಿ, ಕೌಟಿಲೀಯ ರಾಜನೀತಿಯನ್ನು ನಿರಾಕರಿಸಿದನು ಇವನು ಸತ್ತ ೫೦ ವರ್ಷಗಳೊಳಗಾಗಿ, ಬ್ರಾಹ್ಮಣ ಶುಂಗರು ಮೌರ್ಯವಂಶವನ್ನು ನಾಶಮಾಡಿದರು. ಅಸುರರ ಆರ್ಥಿಕವ್ಯವಸ್ಥೆಯು ಮಹಾರಾಷ್ಟ್ರದಂತೆ ತುಂಬಾ ನಿಕೃಷ್ಟವಾದದ್ದಾಗಿದ್ದಿತು. ದೇವಾಸುರರಲ್ಲಿ ಯಾರು ಸಮ್ರಾಜರಾದರೂ ತಮ್ಮ ಅನ್ನವನ್ನು ತಾವೇ ನಿರ್ಮಿಸಿಕೊಳ್ಳಲಾರದೆ, ಭೂಲೋಕದಿಂದ ಸುಲಿಗೆಮಾಡಿ ಜೀವಿಸುತ್ತಿದ್ದರು. ದೇವತೆಗಳು ಅಧಿಕಾರಮತ್ತರಾಗಿ, ಶುದ್ಧ ಸೋಮಾರಿಗಳಾಗಿ, ಸ್ತ್ರೀಲೋಲರಾಗಿದ್ದು ಅಸುರರಿಂದ ಪರಾಜಿತರಾದರು. ಮೊಗಲಸಾಮ್ರಾಜ್ಯವನ್ನು ಶ್ರಮಸಹಿಷ್ಣುಗಳಾದ ಮರಾಟರು ಕಿತ್ತುಕೊಂಡದ್ದು ಇದನ್ನು ಹೋಲುವುದು. ಆದರೆ ಮುಂದೆ ಮರಾಟರು ಕೃಷಿ, ವ್ಯಾಪಾರ, ಕೈಗಾರಿಕೆಗಳ ಕಡೆಗೆ ಸ್ವಲ್ಪವೂ ಲಕ್ಷ್ಯವಿಡದೆ, ತೆರಿಗೆಯನ್ನು ವ್ಯವಸ್ಥೆಪಡಿಸದೆ, ಹಣಬೇಕಾದಾಗಲೆಲ್ಲಾ ಜನಗಳನ್ನು ಕೊಳ್ಳೆಹೊಡೆಯುತ್ತ ರಾಜ್ಯವಾಳತೊಡಗಿದರು. ಅಸುರರೂ ನರಲೋಕವನ್ನುಜೀತಕ್ಕೆ ಹಾಕಿ ಹೀಗೆಯೆ ಜೀವಿಸಲಾರಂಭಿಸಿದರು. ಇವರಿಗೆ ಆಪತ್ತೊದಗಿದಾಗ ಇವರ ಪ್ರಜೆಗಳು ಇವರಿಗೆ ಸಹಾಯಮಾಡದೆ, ಶತ್ರುವಶರಾಗಿ ಇವರ ಪತನಕ್ಕೆ ಕಾರಣರಾದರು. ದೇವತೆಗಳು ಅಸುರರನ್ನು ಸೋಲಿಸಲು ಸ್ವಾವಲಂಬನೆಯಿಂದ ನಾಗರಿಕತೆಯನ್ನು ಕಟ್ಟಲಿಲ್ಲ. ಇವರು ತಮ್ಮ ಸಹಾಯಕ್ಕೆಂದು ಕರೆದವರೇ ಲೋಕಾಧಿಪತ್ಯವನ್ನು

ತಮ್ಮ ವಶಪಡಿಸಿಕೊಂಡುಬಿಟ್ಟರು. ಅದಲ್ಲದೆ ಇವರ ಐಶ್ವರ್ಯವು ತಾತ್ಕಾಲಿಕವಾಗಿ, ಯುದ್ಧಕಾರ್ಯವೊಂದಕ್ಕೆ ಮಾತ್ರ ಒದಗುವಂತಹ ಯಂತ್ರ ಸಾಧನವಾಗಿದ್ದಿತೇ ಹೊರತು ಶಾಶ್ವತಸ್ಥಾಯಿಯಾದ ನಾಗರಿಕತೆಯಾಗಿರಲಿಲ್ಲ. ಆದ್ದರಿಂದ ದೇವತೆಗಳು ಅಸುರರ ಜತೆಯಲ್ಲಿಯೇ ಪತನವನ್ನು ಪಡೆದರು.

## ೬. ಐತಿಹಾಸಿಕಾರ್ಥಗಳು

ಈ ಕಥೆಯ ಐತಿಹಾಸಿಕಾರ್ಥವು ಮೇಲೆಯೇ ಸೂಚಿತವಾಗಿದೆ. ಆಧುನಿಕ ಜರ್ಮನರ ನಾಗರಿಕತೆಯು ಬಹುದೂರ ಅಸುರನಾಗರಿಕತೆಯನ್ನು ಹೋಲುತ್ತಿತ್ತು. ಆದ್ದರಿಂದ ಅವರು ಕಳೆದ ಐರೋಪ್ಯಮಹಾಯುದ್ಧದಲ್ಲಿ—ಅಖಿಲಭೂಮಂಡಲವನ್ನೇ ಎದುರಿಸಿದರೂ—ನಾಲ್ಕುವರ್ಷಕಾಲ ಬಲವಾಗಿ ಹೋರಿ, ಕಡೆಗೆ ಅನ್ನಾಭಾವದಿಂದಲೂ ಅಂತಃಕಲಹದಿಂದಲೂ ತಮ್ಮ ರಾಜನ ಪೆದ್ದತನದಿಂದಲೂ ನಿಮ್ನಪ್ರಜೆಗಳ ದಂಗೆಯಿಂದಲೂ ಪರಾಜಿತರಾದರು.

ಹಿಂದೆ ಪ್ರಾಚೀನ ಗ್ರೀಕರಲ್ಲಿ ಸ್ಪಾರ್ಟಾರಾಜ್ಯದವರು ಹಿಂದಣ ಅಸುರರಂತೆ ಬ್ರಹ್ಮ-ವೈಶ್ಯಬಲಗಳನ್ನು ಶುದ್ಧವಾಗಿ ನಿರಾಕರಿಸಿ, ಕ್ಷಾತ್ರ ಬಲವೊಂದನ್ನೇ ಉಪಾಸಿಸುತ್ತಿದ್ದರು. ಅಥೆನ್ಸ್‌ರಾಜ್ಯದವರು ಬ್ರಹ್ಮ ಬಲವೊಂದನ್ನೇ ಸಾಧಿಸಲು ಒಗೆದರು. ಇದರಿಂದ ಉಭಯರೂ ಅತ್ಯಲ್ಪ ಕಾಲದಲ್ಲಿ ನಶಿಸಿದರು. ರೋಮಕರು ಬ್ರಹ್ಮಬಲಶೂನ್ಯರಾಗಿ, ಅಚ್ಚುಕಟ್ಟಾದ ವ್ಯವಸ್ಥೆಯುಳ್ಳ ಕ್ಷಾತ್ರಬಲಾಭಿವೃದ್ಧಿಯಿಂದ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದರು. ರಜತನಗರಿಯಲ್ಲಿ ನಡೆದಂತೆ ಇವರು ವಿಷಯ ಲಂಪಟರಾಗಿ ನಷ್ಟರಾದರು. ಕಾಡುಜನರಂತಿದ್ದ ಅರಬರಲ್ಲಿ ಮುಹಮ್ಮದನು ಬ್ರಹ್ಮಬಲ ಕ್ಷಾತ್ರಬಲಗಳನ್ನು ಹುಟ್ಟಿಸಿದನು. ಅರಬರು ಸಿಂಧುದೇಶದಿಂದ ಸ್ಪೈಯಿನಾದೇಶದವರೆಗೂ ನಿಮಿಷಾರ್ಧದಲ್ಲಿ ಸಾಮ್ರಾಜ್ಯವನ್ನು ಕಟ್ಟಿದರು. ಆದರೆ ಇವರು ಕ್ಷಾತ್ರವೈಶ್ಯಬಲಗಳಲ್ಲಿ ಕ್ಷೀಣಿಸಿ ಬ್ರಹ್ಮಬಲವನ್ನೇ ಮುಖ್ಯವೆಂದು ಉಪಾಸಿಸಿದ್ದರಿಂದ, ಬ್ರಹ್ಮವೈಶ್ಯಬಲ ಶೂನ್ಯರೂ, ಕ್ಷಾತ್ರೋನ್ಮಾದಭರಿತರೂ, ಒರಟರೂ ಆಗಿದ್ದ ತುರುಕಜಾತಿಯವರಿಂದ ಪರಾಜಿತರಾಗಿ, ಅವರ ಅಧೀನಪ್ರಜೆಗಳಾದರು. ಕ್ರಿ. ಶ.

ಏಳರಿಂದ ಹನ್ನೊಂದನೆಯ ಶತಮಾನದ ವರೆಗೆ ಅರಬರು ಮುಸಲ್ಮಾನ ಪ್ರಪಂಚಕ್ಕೆ ಸಮ್ರಾಜರಾಗಿದ್ದರು. ಆ ಮುಸಲ್ಮಾನರ ವಿದ್ಯಾಸಂಪತ್ತೆಲ್ಲವೂ ಬಹುವಾಗಿ ಈ ಕಾಲದಲ್ಲಿಯೆ ಹುಟ್ಟಿತು. ಕ್ರಿ. ಶ. ೧೦೦೦ದಿಂದ ಮುಂದಕ್ಕೆ ತುರುಕರ ಸಾಮ್ರಾಜ್ಯಕಾಲದಲ್ಲಿ, ಮುಸಲ್ಮಾನಪ್ರಪಂಚದಲ್ಲಿ ಪ್ರಾಯಶಃ ವಿದ್ಯಾಕರ್ಮವು ಅಭಾವವಾಗಿದ್ದಿತು. ಈ ಕಾಲಗಳಲ್ಲಿ ಇರಾಣರು ಹಿಂದೂಗಳು ಮೊದಲಾದವರ ಬುದ್ಧಿಬಲಸಂಪತ್ತಿ ದೊರೆಯದೆ ಇರತಕ್ಕ ಮುಸಲ್ಮಾನ ದೇಶಗಳಲ್ಲಿ ನಾಗರಿಕತೆಯು ಅತ್ಯಂತವಾಗಿ ಕ್ಷೀಣಿಸಿತು. ಕಡೆಗೆ ತುರುಕರು ಸಹ ಬಲತ್ರಯದಲ್ಲೂ ತಮಗಿಂತಲೂ ಅಧಿಕರಾಗಿದ್ದ ಯುರೋಪ್ಯರಿಗೆ ಪರಾಜಿತರಾದರು.

ಭಾರತ ಇತಿಹಾಸರಂಗದಲ್ಲಿ ಎಷ್ಟೋ ಮಹಾರಾಜ್ಯಗಳು ಹುಟ್ಟಿ ಮೆರೆದಿವೆ; ಎಷ್ಟೋ ಮಹಾವಿಭೂತಿಗಳು ಸಾಹಸಕಾರ್ಯಗಳನ್ನು ಎಸಗಿರುವರು. ಇವರಲ್ಲಿ ಬಹುಮಂದಿ ಕೇವಲ ವೈಯಕ್ತಿಕ ಶ್ರೇಯಸ್ಸನ್ನೂ ಬಲಾಭಿವೃದ್ಧಿಯನ್ನೂ ತಾತ್ಕಾಲಿಕ ಸಿರಿಯನ್ನೂ ಅಸುರರಂತೆ ಮುಖ್ಯವೆಂದು ಎಣಿಸಿದ್ದರಿಂದ, ದೃಢವಾದ ನಾಗರಿಕತೆಯನ್ನು ಕಟ್ಟಲು ಕೈಹಾಕಲಿಲ್ಲ. ದೇಶದಲ್ಲಿ ಇಂದ್ರಜಾಲದಂತೆ ರಾಜ್ಯಗಳೂ ಸಾಮ್ರಾಜ್ಯಗಳೂ ಕ್ಷಣಾರ್ಧದಲ್ಲಿ ಹುಟ್ಟುತ್ತಿದ್ದುವು; ಅವು ಹಾಗೆಯೇ ಕ್ಷಣಾರ್ಧದಲ್ಲಿ ಮಾಯವಾಗುತ್ತಿದ್ದುವು. ಜಾತ್ಯವಸ್ಥೆಯು ನಾಗರಿಕತೆಯ ಆಶ್ರಯವುಳ್ಳ ಸಾಮ್ರಾಜ್ಯಗಳು ಹುಟ್ಟಿ ಜೀವಿಸಲು ಪ್ರತಿಬಂಧಕಗಳನ್ನು ಕಲ್ಪಿಸಿತು. ಬ್ರಹ್ಮಬಲವನ್ನು ಅಖಂಡಮಾನ್ಯವಾಗಿ ಪಡೆದಿದ್ದ ಜನಶಾಖೆಯವರು ರಾಷ್ಟ್ರಸೇವೆಯನ್ನು ತುಚ್ಛವೆಂದು ನಿರಾಕರಿಸಿ, ಬ್ರಹ್ಮಬಲವನ್ನು ಕಾಡುಪಾಲು ಮಾಡುತ್ತಿದ್ದರು. ವೈಶ್ಯರು ತಮ್ಮ ಅರ್ಥಕರ್ಮವನ್ನು ರಾಷ್ಟ್ರಹಿತದೃಷ್ಟಿಯಿಂದ ಮಾಡದೆ, ಸ್ವಾರ್ಥಹಿತಬುದ್ಧಿಯಿಂದ ನಡೆಯಿಸುತ್ತಿದ್ದರು. ಕ್ಷತ್ರಿಯರು ಬ್ರಹ್ಮವೈಶ್ಯಬಲವಿಹೀನರಾಗಿ,ಆ ಬಲಸಂಪನ್ನರನ್ನು ರಾಷ್ಟ್ರಹಿತದೃಷ್ಟಿಯಿಂದ ತಮ್ಮ ಅಂಕೆಯಲ್ಲಿಟ್ಟುಕೊಳ್ಳಲಾರದೆ, ಅತಿ ಸುಲಭವಾಗಿ ವಿಷಯೋಪಭೋಗಕ್ಕೆ ಬಿದ್ದು ಸತ್ವಹೀನರಾಗುತ್ತಿದ್ದರು. ಕಡೆಗೆ ಹಿಂದೂಸಮಾಜದಲ್ಲಿ ಕ್ಷತ್ರವೈಶ್ಯಬಲಗಳು ಶುದ್ಧವಾಗಿ ನಷ್ಟವಾಗಿ, ಬ್ರಹ್ಮಬಲವು ವಿಕಟಾವಸ್ಥೆಯಲ್ಲಿ ಜೀವಿಸಲಾರಂ-

ಭಿಸಿತು. ಇದರಿಂದಲೇ ನಾವು ಮಹಾಭಾರತದ ಯುದ್ಧಾನಂತರ ಮ್ಲೇಚ್ಛರು ಪಂಚನದ ದೇಶದಲ್ಲಿ ಅರ್ಜುನನನ್ನು ಸೋಲಿಸಿ, ಶ್ರೀಕೃಷ್ಣನ ರಾಣಿವಾಸವನ್ನು ಸೂರೆಮಾಡಿದುದರಿಂದ, ದೇಶಕ್ಕೆ ಕಾಲಿಟ್ಟ ಪರಕೀಯರೆಲ್ಲರಿಗೂ ಹಾಸ್ಯಾಸ್ಪದವಾಗಿ ಸೋತು, ಪರರಿಗೆ ನಿತ್ಯದಾಸರಾಗಿ ಜೀವಿಸುತ್ತಿರುವೆವು.

ಮೌರ್ಯ ಮತ್ತು ಮಹಾರಾಷ್ಟ್ರರ ಪತನದ ಕಾರಣಗಳನ್ನು ಹಿಂದೆಯೇ ವಿವರಿಸಿದೆ. ಸಾರನಾಥದಲ್ಲಿ ಗೌತಮಬುದ್ಧನು ಉಪದೇಶಿಸಿದ ಪ್ರಥಮಪ್ರಸಂಗವಾದ ಧರ್ಮಚಕ್ರಪ್ರವರ್ತನ ಸೂತ್ರವನ್ನು ಕಾರ್ಯತಃ ಅನುಷ್ಠಿಸಲು ಅಶೋಕನು ಕೈಕೊಂಡಿದ್ದನು. ಕೌಟಿಲ್ಯನೀತಿಯನ್ನು ಬಿಟ್ಟು ಚಂದ್ರಗುಪ್ತನು ನಗ್ನಮತವನ್ನು ಅವಲಂಬಿಸಿದ್ದನು.

ನಮ್ಮ ಕಥೆಯು ಹಿಂದೂಧರ್ಮದ ಇತಿಹಾಸವನ್ನು ಪರಂಪರೆಯಾಗಿ ತಿಳಿಯಪಡಿಸುವುದು. ವೈದಿಕಕರ್ಮಮತವು ಹಿಂದೆಬಿದ್ದು ಜ್ಞಾನ, ಭಕ್ತಿ ಮೊದಲಾದ ಮತಗಳು ತಲೆಯೆತ್ತಿಕೊಂಡುವು. ಬೌದ್ಧಮತವು ಅವುಗಳನ್ನು ಮೆಟ್ಟಿ ಮೆರೆಯಿತು. ಹಿಂದೂಮತವು ನಮ್ಮ ಕಥೆಯ ದೇವತೆಗಳಂತೆ ಸಂಸ್ಕೃತವಾಗಿ ಭಕ್ತಿಮತವನ್ನು ಪುರಸ್ಕರಿಸಿ, ಹರಿಹರರ ಕೈಹಿಡಿದು ಬೌದ್ಧಮತವನ್ನು ದೇಶದಿಂದ ಓಡಿಸಿತು. ಅನೇಕ ಕಡೆಗೆ ಶೈವಮತವೂ ಬೌದ್ಧಮತವೂ ಸಮ್ಮಿಳಿತವಾದುವು. ನಮ್ಮ ಕಥೆಯು ದೇವಕುಲದ ಚರಿತ್ರೆ, ಕರ್ಮಜ್ಞಾನಭಕ್ತಿಮತಗಳ ಉದಯ, ಶೈವ-ವೈಷ್ಣವ-ಬೌದ್ಧಮತಗಳ ಇತಿಹಾಸ ಇತ್ಯಾದಿ ಅಂಶಗಳನ್ನು ಸ್ವಲ್ಪಮಟ್ಟಿಗೆ ತೋರಿಸಿಕೊಡುವುದು.

ಮತಧರ್ಮಕ್ಕೂ ರಾಜಕೀಯ ಉಚ್ಛ್ರಾಯಕ್ಕೂ ನಾಗರಿಕತೆಯ ಏಳಿಗೆಗೂ ಇರತಕ್ಕ ಸಂಬಂಧವನ್ನು ಈ ಕಥೆಯು ಸ್ವಲ್ಪದೂರ ತಿಳಿಯಪಡಿಸುವುದು.

ಕ್ರಿಸ್ತಮತೀಯರು ಪೂಜಿಸತಕ್ಕ ಸ್ವಸ್ತಿಕಚಿಹ್ನವು ಭರತಖಂಡದಲ್ಲಿ ಹುಟ್ಟಿ, ಇತರ ಕಡೆಗಳಿಗೆ ಹರಡಿತು. ಅದು ಈಗ ಹಿಟ್ಲರನ ಧ್ವಜವಾಗಿದೆ. ಮುಸಲ್ಮಾನರ ಬಾಲಚಂದ್ರಚಿಹ್ನವು ಸಹ ಬಹುಪ್ರಾಚೀನ

ಕಾಲದಿಂದಲೂ ಭರತಖಂಡದಲ್ಲಿದ್ದಿತು. ಲಿಂಗಪೂಜೆಯು ಪ್ರಪಂಚದ ಬಹುದೇಶಗಳಲ್ಲಿ ಹರಡಿದ್ದಿತು. ಸ್ತ್ರೀದೇವತೆಯೇ ಪ್ರಧಾನದೇವತೆಯೆಂದು ಇಗುಪ್ತ ಮೊದಲಾದ ದೇಶಗಳಲ್ಲಿ ಕೆಲವು ಶಾಖೆಗಳವರು ಭಾವಿಸಿದ್ದರು. ಈ ಲೈಂಗ್ಯಮತವೂ ಮಾತೃದೇವತಾ ಪೂಜಕಮತವೂ ಭರತಖಂಡದಲ್ಲಿ ಅತ್ಯಂತ ಪ್ರಾಬಲ್ಯವನ್ನು ಪಡೆದುವು. ನಮ್ಮ ಕಥೆಯು ಈ ಅಂಶಗಳನ್ನು ಸೂಕ್ತಾನುಸಾರ ಎತ್ತಿ ತೋರಿಸುವುದು. ಗ್ರೀಕರ ಪ್ರೊಮಿಥಿಯುಸ್ಸನು ಕೆಲವಂಶಗಳಲ್ಲಿ ಭೃಗುವನ್ನು ಹೋಲುವನು.

## ೭. ಎಚ್ಚರಿಕೆ

ಗ್ರಂಥಕರ್ತನು ತನ್ನ ಮತವನ್ನೂ ದೇವರುಗಳನ್ನೂ ಪುರಾಣಕಥಾವಳಿಯನ್ನೂ ಈ ಪುಸ್ತಕದಲ್ಲಿ ಪರಿಹಾಸ್ಯಮಾಡಿ ಅಪಮಾನಿಸಿರುತ್ತಾನೆಂದು ಶೈವ–ವೈಷ್ಣವ–ಶಾಕ್ತ–ಬೌದ್ಧ–ಕ್ರೈಸ್ತಾದಿಗಳು ಯಾರೂ ಭಾವಿಸಲಾರರೆಂದು ಎಣಿಸುತ್ತಾನೆ. ಕವಿಗೆ ಲೋಕವು ಕೊಟ್ಟಿರತಕ್ಕ ಸ್ವಾತಂತ್ರ್ಯವನ್ನು ಗ್ರಂಥಕರ್ತನು ದುರುಪಯೋಗ ಪಡಿಸಿ, ಇತರರಿಗೆ ಮನೋವ್ಯಥೆಯನ್ನುಂಟುಮಾಡಲು ಪ್ರವರ್ತಿಸಿಲ್ಲ.

## ೮. ಉಪಸಂಹಾರ

'ಗ್ರಂಥಾಶಯವನ್ನು ತಿಳಿಸಲು ಹೊರಟ ವಿವರಣೆಯು ಅತಿಯಾಗಿ ಉಬ್ಬಿಸಿತು. ದೇವತೆಗಳು ನಿರ್ಮಿಸಿದ್ದ ಜಂಗಮವಾದ ವಿಶ್ವರಥ ಸಮಾಜಯಂತ್ರವು ಏನಾಯಿತು? ಪುರಾಣಗಳು ಈ ವಿಷಯದಲ್ಲಿ ಮೌನವನ್ನು ಧರಿಸಿವೆ. ಭಾರತಚರಿತ್ರೆಯಲ್ಲಿ ಅದು ಎಲ್ಲಿಯೂ ಗೋಚರಿಸುವುದಿಲ್ಲ. ಒಂದುಪಕ್ಷ ಅದು ಭಾರತಜನತೆಗೆ ಲಭಿಸಿದ್ದರೆ ನಾವು ಪರಾಧೀನತೆಗೆ ನಿತ್ಯಪಟ್ಟವನ್ನು ಕಟ್ಟುತ್ತಿರಲಿಲ್ಲ. ಹಿಂದೂಸಮಾಜಯಂತ್ರವು ಬುದ್ಧನ ಕಾಲದಿಂದಲೂ ವಿಜ್ಞಾನದ ಆಸರೆಯನ್ನೂ ಜಂಗಮಸ್ವಭಾವವನ್ನೂ ಕಳೆದುಕೊಂಡು, ಸ್ಥಾಣುವನ್ನು ಪಾಸಿಸುತ್ತ, ಸ್ಥಾಣುವಾಗಿಬಿಟ್ಟಿರುವುದು. ತ್ರಿಪುರದೈತ್ಯರು ಈ ಸಮಾಜವನ್ನು ಅಂದಿನಿಂದಲೂ ಕಾಲಲ್ಲಿ ತುಳಿಯುತ್ತ ಭೈರವಲಾಸ್ಯವನ್ನು ಆಡುತ್ತಿರುವರು. ಈ ಸಮಾಜಯಂತ್ರವು ಮರಳಿ ಜಂಗಮವಾದ ವಿಶ್ವರಥನಾಗರಿಕತೆಯಾಗಿ ಮಾರ್ಪಡುವುದು ಯಾವಾಗ?

—**ಮಂ. ಅ. ಡೊ.**

# ತ್ರಿಪುರದಹನ

## ಪ್ರಥಮ ಚಿತ್ರ

**ಸ್ಥಳ**— ಸಮುದ್ರತೀರಕ್ಕೆ ಸಮೀಪವಾಗಿರುವ ಒಂದು ಬೆಟ್ಟದ ಕಿಬ್ಬರಿ. ಅಸುರಪ್ರಮುಖರಾದ ಮಯ, ಸುಗ್ರೀವ, ಭೀಷಣ, ಹಸ್ತಿ, ಕರಾಳ ಮೊದಲಾದವರು ಮಾತಾಡುತ್ತಿರುವರು. ಮಯನು ಬಹಳ ವಯಸ್ಕನಾಗಿರುವನು. ಸುಗ್ರೀವನು ನಡು ಪ್ರಾಯದವನು. ಉಳಿದವರು ಯುವಕರು.

**ಸುಗ್ರೀವ**:— ಯುವಕರೇ, ಸ್ವಲ್ಪ ಸೈರಿಸಿರಿ. ಎಲ್ಲವೂ ಯುದ್ಧ ಒಂದರಿಂದಲೇ ಸಾಧ್ಯವಾಗುವುದಿಲ್ಲ. ಕಾಲವನ್ನು ನೋಡಿ ಕೆಲಸ ಮಾಡಬೇಕಲ್ಲದೆ ದುಡುಕಬಾರದು.

**ಕರಾಳ**:— ಯುದ್ಧದಿಂದ ಸಾಧ್ಯವಾಗದ್ದು ಮತ್ತಾವುದರಿಂದ ಆದೀತು? ನಮ್ಮ ಈಗಿನ ದುರವಸ್ಥೆಯನ್ನು ಯೋಚಿಸಿರಿ; ಮಹಾವೈಭವದಿಂದ ಮೂರು ಲೋಕವನ್ನೂ ಆಳುತ್ತಿದ್ದ ನಾವು ಸಕಲ ಸಂಪತ್ತನ್ನೂ ಕಳೆದುಕೊಂಡು, ನಿಲ್ಲುವುದಕ್ಕೆ ನೆಲೆಯಿಲ್ಲದೆ, ಉಡುವುದಕ್ಕೆ ಬಟ್ಟೆಯಿಲ್ಲದೆ, ಈ ಬೆಟ್ಟದ ಕಿಬ್ಬರಿಯಲ್ಲಿ—ನೆಲದಲ್ಲಿ ಡೊಗರು ಮಾಡಿಕೊಂಡು ಇಲಿಗಳಂತೆ ಜೀವಿಸುತ್ತಿದ್ದೇವೆ. ಈ ಸಂತಾಪದಿಂದ ನಮ್ಮಲ್ಲಿ ಹುಟ್ಟುತ್ತಿರುವ ಪ್ರಳಯರೋಷಾಗ್ನಿಯು ಯುದ್ಧದಿಂದಲ್ಲದೆ ಬೇರೆ ಮಾರ್ಗದಿಂದ ಎಂದಿಗೆ ಉಪಶಮನವಾದೀತು?

**ಭೀಷಣ:—** ಯುದ್ಧಶೌರ್ಯವು ಅಸುರರ ಆಜನ್ಮಸಿದ್ಧವಾದ ಧರ್ಮವು. ಕಪಟತಂತ್ರವು ರಣಹೇಡಿಗಳಾದ ದೇವತೆಗಳ ಧರ್ಮವು. ಮೊದಲಿನಿಂದಲೂ ದೇವತೆಗಳು ತಂತ್ರದಿಂದಲೇ ನಮ್ಮನ್ನು ಜಯಿಸುತ್ತಾ ಬಂದಿದ್ದಾರೆ. ಅಂತಹವರನ್ನು ನಾವು ನಮ್ಮ ಸ್ವಭಾವವಿರುದ್ಧವಾದ, ಅಭ್ಯಾಸವಿಲ್ಲದ ತಂತ್ರಮಾರ್ಗದಿಂದ ಸೋಲಿಸಲಾದೀತೇ?

**ಮಯ:—** ಬಾಲಕರೇ, ಸಮರಪಿತ್ತಭ್ರಮೆಯಿಂದ ಏಕೆ ವಿವೇಕವನ್ನು ಕಳೆದುಕೊಳ್ಳುತ್ತೀರಿ? ಸ್ವಲ್ಪ ಸಾವಧಾನವಾಗಿ ಯೋಚನೆಮಾಡಿ ನೋಡಿ; ಜಗತ್ತು ಹುಟ್ಟಿದಾಗಿನಿಂದಲೂ ಅಸುರರು ಪದೇಪದೇ ತ್ರೈಲೋಕ್ಯಾಧಿಪತ್ಯವನ್ನು ಮಾಡಿರುವರು. ಆದರೆ ತಮ್ಮ ಪದವಿಯನ್ನು ಮಾತ್ರ ಏಕೆ ಬಹಳಕಾಲ ದಕ್ಕಿಸಿಕೊಳ್ಳಲಿಲ್ಲ? ಯುದ್ಧಶೌರ್ಯ ಮಾತ್ರವಲ್ಲದೆ ಸ್ವಾಭಾವಿಕವಾದ ಬಲ ಪರಾಕ್ರಮಗಳಲ್ಲೂ ತಪಸ್ಸಾಮರ್ಥ್ಯದಲ್ಲೂ ವಿದ್ಯಾಬುದ್ಧಿಗಳಲ್ಲೂ ಕಲಾಕೌಶಲ್ಯದಲ್ಲೂ ನಿರ್ಮಾಣಪ್ರತಿಭೆಯಲ್ಲೂ ಉದ್ಯೋಗಶಕ್ತಿಯಲ್ಲೂ ನಾವು ದೇವತೆಗಳನ್ನು ಮೀರುಮಿಗಿಸಿದ್ದೇವೆ. ಹೀಗಿದ್ದರೂ ಲೋಕದಲ್ಲಿ ನಾವು ಸುಖಪಟ್ಟು ಬಾಳಲಿಲ್ಲ. ಆಚಂದ್ರಾರ್ಕವಾದ ಕೀರ್ತಿಯನ್ನು ಪಡೆಯಲಿಲ್ಲ. ಶಾಶ್ವತ ಸ್ಥಾಯಿಯಾದ ಯಾವ ಸ್ಮಾರಕವನ್ನೂ ಕಲ್ಪಿಸಲಿಲ್ಲ. ವಿಶ್ವದ ಜನತೆಯ ಮೆಚ್ಚುಗೆಯನ್ನು ಪಡೆಯಲಿಲ್ಲ. ನಮ್ಮದಾಗಿ ಒಂದು ನೆಲೆ ಸಹ ಇಟ್ಟುಕೊಳ್ಳಲಾರದೆ, ದೇಶಭ್ರಷ್ಟರಾಗಿ—ಪದಭ್ರಷ್ಟರಾಗಿ, ಜಲದಲ್ಲೋ ಸೀರಿನಲ್ಲೋ ಕಾಡುಗಳಲ್ಲೋ ಅಡಗಿ ಕಾಲಯಾಪನೆ ಮಾಡುತ್ತಿದ್ದೇವೆ. ನಮ್ಮ ದಾಯಾದಿಗಳಾದ ಸುರರು ಹಾಗೆ ಬದುಕುತ್ತಿರುವುದಕ್ಕೂ ನಮ್ಮ ಚರಿತ್ರೆ ಈ ರೀತಿಯಾಗಿ ಇರುವುದಕ್ಕೂ ಕಾರಣವನ್ನು ಯೋಚಿಸಿ ನೋಡಿರಿ.

**ಭೀಷಣ:—** ಯುದ್ಧಕಾರ್ಯಕ್ಕೆ ಅಯೋಗ್ಯರಾಗಿರುವ ನಿನ್ನಂತಹವರ ಪ್ರಾಬಲ್ಯವು ಹೆಚ್ಚುತ್ತಾ ಬರುತ್ತಿರುವುದೇ ನಮ್ಮ ದೌರ್ಭಾಗ್ಯಕ್ಕೆ ಕಾರಣವು.

**ಮಯ:—** ನನ್ನಂತಹವರಿಗೆ ಮಾತ್ರ ಪ್ರಾಬಲ್ಯವು ದೊರೆತು, ನಮ್ಮ ಕುಲದವರು ನಮ್ಮ ಪರಾಮರ್ಶದಂತೆ ನಡೆದುಕೊಂಡಿದ್ದರೆ, ಅಸುರರ

ಚರಿತ್ರೆಯು ಬೇರೆ ಮಾರ್ಗವನ್ನು ಹಿಡಿಯುತ್ತಿತ್ತು. ಅಸುರಪತನಕ್ಕೆ ಅವರ ಕ್ಷಾತ್ರೋನ್ಮಾದವಲ್ಲವೇ ಮೂಲಕಾರಣವು? ನಮ್ಮ ಕುಲದವರು ಯುದ್ಧವೊಂದೇ ಜೀವನದ ಸರ್ವಪುರುಷಾರ್ಥವೆಂದು ನಂಬಿರುವರು. ತಮ್ಮ ಸಕಲ ಶಕ್ತಿಸಾಮರ್ಥ್ಯಗಳನ್ನೂ ಕ್ಷಾತ್ರವೃತ್ತಿಗೆ ಬಲಿಕೊಟ್ಟು, ಮಾತಿಗೆ ಮುಂಚೆ ಯುದ್ಧಕ್ಕೆ ಹೊರಡುತ್ತಾ, ಸರ್ವದಾ ಕದನದ ಚಿಂತೆಯಲ್ಲಿ ಮುಳುಗಿ, ಇಂಥ ದುರ್ದೆಸೆಯನ್ನು ತಂದುಕೊಂಡರು. ನಿರ್ಮಾಣ ಪ್ರತಿಭೆಯಲ್ಲಿ ನನ್ನನ್ನು ಸರಿಗಟ್ಟತಕ್ಕವರು ಈ ಹದಿನಾಲ್ಕು ಲೋಕಗಳಲ್ಲಿ ಯಾರೂ ಇಲ್ಲ; ಆದರೆ ನಾನು ಯುದ್ಧಾಭಿಮಾನಿಯಲ್ಲವಾದ್ದರಿಂದ ನಿಮ್ಮ ಸಮಾಜದಲ್ಲಿ ಶುದ್ಧ ಅಪ್ರಯೋಜಕನಾಗಿ, ಜೀವನ್ಮೃತನಂತೆ ಕಾಲಯಾಪನೆ ಮಾಡಬೇಕಾಗಿದೆ. ನಿಮ್ಮಂತಹ ಮೂಢರ ಕ್ಷಾತ್ರೋ-ನ್ಮಾದವು ನಮ್ಮ ಅಸುರಕುಲದವರ ಅನರ್ಘ್ಯವಾದ ಶಕ್ತಿಸಾಮರ್ಥ್ಯಗಳೆಲ್ಲವನ್ನೂ ತುಳಿದು ಮೆಟ್ಟಿ ನಾಶಪಡಿಸುತ್ತಿರುವುದರಿಂದ, ಈ ಕುಲದವರು ಘೋರ ದುರ್ಗತಿಯನ್ನು ಪಡೆದು ಸಂಕಟಪಡುತ್ತಿರುವರು.

**ಕರಾಳ:**— ಎಂದಿಗೂ ಇಲ್ಲ. ಕ್ಷಾತ್ರವೃತ್ತಿಯ ಮಹಿಮೆಯು ನಿನ್ನಂತಹ ಹೇಡಿಗಳಿಗೆ ಗೊತ್ತಾಗುವುದಿಲ್ಲ. ನಿನ್ನ ನಿರ್ಮಾಣಪ್ರತಿಭೆಯಿಂದ ಅಸುರಕುಲಕ್ಕೆ ಆಗತಕ್ಕ ಪ್ರಯೋಜನವೇನು? ನಮ್ಮ ಪ್ರಭುಗಳು ದಿವ್ಯವಾದ ವರಶಕ್ತಿಯ ಸಹಾಯದಿಂದ ಶತ್ರುಗಳನ್ನು ಧೂಳಿಪಟ ಮಾಡಿ, ಮೂರು ಲೋಕದ ಸಂಪತ್ತನ್ನೂ ಕಿತ್ತು ನಮ್ಮೆಲ್ಲರಿಗೂ ಹಂಚಿಕೊಡುತ್ತಿದ್ದರು. ಅಂತಹರಿಗೆ ನಿನ್ನಂತಹ ಬಡಶಿಲ್ಪಿಗಳು ಕಟ್ಟತಕ್ಕ ಕೋಟೆ ಕೊತ್ತಲಗಳ ಸಹಾಯವಾಗಲಿ, ಪ್ರಾಕೃತಜೀವಿಗಳ ಸೇನೆಯ ನೆರವಾಗಲಿ ಏಕೆ ಬೇಕಾಗುವುದು? ನಿನ್ನಂತಹ ಅಪ್ರಯೋಜಕ ಮೂಢರು ಇಂತಹ ದಿವ್ಯ ಯುದ್ಧಶಕ್ತಿಗೆ ಅಪೋಹ ತರುವುದರಿಂದ ನಾವು ಅಪದೆಶೆಯನ್ನು ಪಡೆಯುತ್ತಿದ್ದೇವಲ್ಲದೆ ಮತ್ತೇನೂ ಇಲ್ಲ.

**ಸುಗ್ರೀವ:**— ನಮ್ಮ ದುರ್ಗತಿಗೆ ಆ ಹಾಳು ವಿಷ್ಣುವೇ ಕಾರಣನಾಗಿರುವನು. ಸುರರಿಗೆ ಒಡೆಯರಾದ ತ್ರಿಮೂರ್ತಿಗಳಲ್ಲಿ, ಬ್ರಹ್ಮನು ದೇವಾಸುರರಲ್ಲಿ ಪಕ್ಷಪಾತವನ್ನು ಇಟ್ಟಿಲ್ಲ. ಶಿವನಿಗೆ ನಮ್ಮಲ್ಲಿಯೇ ಅಭಿಮಾನ ಅಧಿಕವೆಂದು ಹೇಳಬೇಕು. ಹಿಂದೆ ದೇವತೆಗಳು ಯುದ್ಧದಲ್ಲಿ

ನಮಗೆ ಹವಿರ್ಭಾಗ ಕೊಡದೆ ಓಡಿಸಿದಂತೆ, ಶಿವನಿಗೂ ಕೊಡದೆ ಬಹಿಷ್ಕರಿಸಿದ್ದರು. ಶಿವನು ರೇಗಿ, ವೀರಭದ್ರನಾಗಿ, ದೊಂದುಳಿ ನಡೆಯಿಸಿದ್ದರಿಂದ ದೇವತೆಗಳು ಹೆದರಿ, ಅವನನ್ನು ತಮ್ಮ ಕೂಟದಲ್ಲಿ ಸೇರಿಸಿಕೊಂಡರು. ಆದರೂ ಅವನಿಗೂ ದೇವತೆಗಳಿಗೂ ಸರಿಯಾದ ಅಂತಶ್ಶುದ್ಧಿಯಿದೆ-ಎಂದು ಹೇಳಲಾಗುವುದಿಲ್ಲ. ಎಷ್ಟೋ ಮಂದಿ ಅಸುರಶ್ರೇಷ್ಠರು ಶಿವನಿಂದ ಅನುಗೃಹೀತರಾಗಿ ದೇವತೆಗಳನ್ನು ಸೋಲಿಸಿರುವರು. ಆದರೆ ಆ ಪರಮನೀಚನಾದ ಹರಿಯು ಮಾತ್ರ 'ಅಸುರಾರಿ' ಎಂಬ ಬಿರುದನ್ನು ವಹಿಸಿ, ನಮ್ಮನ್ನು ಅನಾದಿಯಾಗಿ ಸೋಲಿಸಿರುವನು.

**ಹಸ್ತಿ:**— ನಾವು ಬ್ರಹ್ಮ ಶಿವರನ್ನು ಕುರಿತು ಪದೇಪದೇ ತಪಸ್ಸು ಮಾಡಿ ಹರಿಯಿಂದ ಭಂಗಪಡುವುದಕ್ಕೆ ಪ್ರತಿಯಾಗಿ, ಈ ವಿಷ್ಣುವನ್ನೇ ಭಜಿಸಿ ಶ್ರೇಯಸ್ಸನ್ನೇಕೆ ಪಡೆಯಬಾರದು ?

**ಮಯ:**— ಈತನು ನಮಗೆ ಸುಲಭವಾಗಿ ಮೋಸಹೋಗತಕ್ಕವನಲ್ಲ. ದುಷ್ಟ ಕ್ಷಾತ್ರಕಲುಷಿತ ಚಿತ್ತರಾದ ನಿಮ್ಮಲ್ಲಿ ನಿಜವಾದ ಭಕ್ತಿ-ಭಾವ ಹುಟ್ಟಬೇಕಾದರೆ ಎಂತಹ ದೊಡ್ಡ ಕ್ರಾಂತಿಯುಂಟಾಗಬೇಕು!

**ಕರಾಳ:**— ಏನು ? ಅಸುರರು ಹರಿಯನ್ನು ಭಜಿಸುವುದೇ ? ಈ ಕೃತ್ರಿಮಿಯನ್ನು ನಂಬಿದವರ ಪಾಡು ಯಾರಿಗೆ ತಿಳಿದಿಲ್ಲ ? ಹರಿಭಕ್ತರಲ್ಲೆಲ್ಲಾ ಪ್ರಹ್ಲಾದನು ಶ್ರೇಷ್ಠನು. ಅಂತಹನಿಗೆ ವಿಷ್ಣುವು ಮಾಡಿದ ಉಪಕಾರವೇನು ? ಪ್ರಹ್ಲಾದನ ತಂದೆಯನ್ನು ಕೊಂದನು. ಮಗನಾದ ವಿರೋಚನನನ್ನು ಸಂಹರಿಸಿದನು. ಮೊಮ್ಮಗನಾದ ಬಲಿಯನ್ನು ಊರ್ಧ್ವಲೋಕಗಳಿಂದ ಓಡಿಸಿದನು. ಮರಿಮಗನಾದ ಬಾಣಾಸುರನನ್ನು ಭೂಲೋಕದಿಂದ ಹೊರಡಿಸಿದನು. ಪ್ರಹ್ಲಾದನಿಗೆ ರಾಜ್ಯಾಧಿಪತ್ಯವನ್ನು ತಪ್ಪಿಸಿದನು. ಈ ನೀಚನು ತನ್ನ ಲಕ್ಷ್ಮೀದೇವಿಯ ತವರುಮನೆಯವರು ಅಸುರರಲ್ಲಿ ಸ್ವಲ್ಪ ಅಭಿಮಾನವಿಟ್ಟದ್ದಕ್ಕೆ ಸಹಿಸಲಾರದೆ, ಆಕೆಯ ತಾಯಿಯನ್ನು ಕೈಯಾರೆ ಕತ್ತರಿಸಿ, ಅವಳ ಸಹೋದರರಾದ ಶುಕ್ರಾಚಾರ್ಯರ ಕಣ್ಣನ್ನು ನಾಶಮಾಡಿ, ಅವಳ ತಂದೆಯಾದ ಭೃಗುವಿನ ಕಾಲುಗಳಲ್ಲಿದ್ದ ಕಣ್ಣುಗಳನ್ನು ತಂತ್ರದಿಂದ ಇಂಗಿಸಿದ್ದಲ್ಲದೆ, ಲಕ್ಷ್ಮಿಗೆ ಭೃಗುವಂಶತ್ವವನ್ನೇ ತಪ್ಪಿಸಲು ಬಗೆದು, ಅವಳನ್ನು ಸಮುದ್ರದ ಪಾಲು

ಮಾಡಿಸಿದನು. ಇಂತಹ ಚಾಂಡಾಲನನ್ನು ನಾವು ಶರಣುಹೊಕ್ಕು ಜೀವಿಸಬೇಕೇ? ಈ ಮಾತನ್ನು ಬಹಿರಂಗವಾಗಿ ಹೇಳುತ್ತಿರುವ ಹಸ್ತಿಯ ನಾಲಗೆಯನ್ನು ಕತ್ತರಿಸುವವರಾರೂ ಇಲ್ಲವೇ? ನನಗೆ ಈ ಮಾತುಗಳನ್ನು ಕೇಳಿ ಸರ್ವಾಂಗವೂ ಉರಿಯುತ್ತಿದೆ.

**ಮಯ:**— ಹಾಗಾದರೆ ನೀವು ಈಗ ವಿಷ್ಣುವನ್ನು ಯುದ್ಧದಲ್ಲಿ ಸೋಲಿಸಲು ಯೋಚಿಸಿರುವಿರೋ? ಅದಕ್ಕೆ ನಿಮ್ಮಲ್ಲಿ ಸಾಮರ್ಥ್ಯ ವುಂಟೋ?

**ಭೀಷಣ:**— ಹಾಗಿದ್ದರೆ ನಾವೇಕೆ ಈ ಪೊಟ್ಟರೆಯಲ್ಲಿ ಅಡಗಿ ಕುಳಿತಿರುತ್ತಿದ್ದೆವು! ನಾವು ಹೀಗೆ ನೂರಾರು ಸಲ ಪದಭ್ರಷ್ಟರಾಗಿದ್ದೇವೆ. ಪ್ರತಿಸಲವೂ ನಮ್ಮ ಯಜಮಾನರು ಬ್ರಹ್ಮಶಿವರನ್ನು ಕಠೋರ ತಪಸ್ಸಿನಿಂದ ಮೆಚ್ಚಿಸಿ, ಅನರ್ಘ್ಯವರಗಳ ಮೂಲಕ ದಿವ್ಯಯುದ್ಧಶಕ್ತಿಯನ್ನು ಸಂಪಾದಿಸಿ, ಲೋಕಾಧಿಪತ್ಯವನ್ನು ಪುನಃ ಪಡೆಯುತ್ತಿದ್ದರು. ಈ ಸಲವೂ ನಮ್ಮ ರಾಜಕುಮಾರರು ಹಾಗೆಯೇ ಮಾಡುವರೆಂದು ನಾವೆಲ್ಲರೂ ಎಣಿಸಿದ್ದರೆ, ನಿಮ್ಮಂತಹ ಹೇಡಿಗಳಾದ ಮುದುಕರೆಲ್ಲರೂ ಗೊಡ್ಡುಬ್ರಾಹ್ಮಣರಾದ ಶುಕ್ರಾಚಾರ್ಯರನ್ನು ಮುಂದಿಟ್ಟುಕೊಂಡು, ಏನೂ ಅರಿಯದ ಆ ಕುಮಾರರನ್ನು—ನಮ್ಮಲ್ಲಿ ಎಂದೂ ಯಾರೂ ಕಂಡರಿಯದ—ಸರಸ್ವತಿಯನ್ನು ಕುರಿತು ತಪಸ್ಸು ಮಾಡಲು ಕಳುಹಿಸಿದಿರಿ. ಅವಳ ಅನುಗ್ರಹದಿಂದ ಇವರು ಕೆಲಸಕ್ಕೆ ಬಾರದ ಬ್ರಾಹ್ಮಣರಂತೆ ವಿದ್ಯಾವಂತರಾಗಿ ಬಿಟ್ಟಿರುವರು. ಇದರಿಂದ ನಮಗೇನು ಬಂದ ಹಾಗಾಯಿತು? ವಿದ್ಯೆಯಿದ್ದ ಕಡೆಗೆ ಕ್ಷಾತ್ರವೂ ಸಾಮ್ರಾಜ್ಯವೂ ಆರ್ಥಿಕೋನ್ನತಿಯೂ ಇರಲಾರವು. ವಿದ್ಯೆ ಹೆಚ್ಚಿದಷ್ಟು ಹೇಡಿತನ ಹೆಚ್ಚುವುದು. ನಮ್ಮಂತರ ?ಕುಲದವರ ಬಲಾತ್ಕಾರದಿಂದ ಮತ್ತೆ ಈ ರಾಜಕುಮಾರರು ಬ್ರಹ್ಮನನ್ನು ಕುರಿತು ತಪಸ್ಸುಮಾಡುತ್ತಿರುವರು. ಇವರು ಹಿಂದಣವರಂತೆ ಅಜೇಯತ್ವಾದಿ ವರಗಳನ್ನು ಪಡೆದು ಬರುವರೇ?—ಎಂಬ ದಾರುಣ ಸಂದೇಹವು ನಮ್ಮನ್ನು ಪೀಡಿಸುತ್ತಿದೆ. ಅವರು ಎಂತಹ ದಿವ್ಯಸ್ಥಿತಿಗಳನ್ನು ಪಡೆದು ಬಂದರೂ ನೀವು ವಿದ್ಯೆ ಎಂಬ ಮಾರಿಯನ್ನು ಮನೆಗೆ ಹೊಗಿಸಿರುವುದರಿಂದ ಅವುಗಳೆಲ್ಲವೂ ಭಂಗಪಡುವುವು—ಎಂಬ ಹೆದರಿಕೆ

ನಮಗೆ ಇದೆ. ನಿಮ್ಮ ಮುದುಕರ ಆಡಳಿತದಿಂದ ನಮ್ಮ ಬಾಳು ಜೀಳಾಯಿತು.

**ಮಯ:—** ಶುಕ್ರಾಚಾರ್ಯರ ರಾಜನೀತಿಯನ್ನು ನಿಮ್ಮಂತಹ ಅಜ್ಞಪಶುಗಳು ಹೇಗೆ ಅರಿಯಬಲ್ಲಿರಿ? ಕಾಲವೆಂಬುದು ನಿಶ್ಚಲವಾಗಿ ನಿಲ್ಲತಕ್ಕ ವಸ್ತುವಲ್ಲ—ಎಂದರಿಯದೆ, ಅಸುರರು ಪದೇಪದೇ ಭಂಗಪಟ್ಟಿರುವರು. ಕಾಲಸ್ಥಿತಿ ವ್ಯತ್ಯಸ್ತವಾದಾಗಲೆಲ್ಲ ನಮ್ಮ ಕುಲದವರು ತಮ್ಮ ಜೀವನದ ಮಾರ್ಗಗಳನ್ನು ಮಾರ್ಪಡಿಸಿಕೊಂಡು ಪ್ರಗತಿಪರರಾಗಲು ಇಚ್ಛಿಸದೆ, ಹಳೆಯ ಸಂಪ್ರದಾಯಗಳನ್ನು ಸ್ವಲ್ಪವೂ ಬಿಡದೆ ಹೋಗಿ ಅಧೋಗತಿಗೆ ಬಂದಿರುವರು. ಅಸುರರು ಆದಿಕಾಲದಲ್ಲಿ ಅಂಗೀಕರಿಸಿದ ಕ್ಷಾತ್ರಪಂಥದಲ್ಲಿಯೇ ಶಾಶ್ವತವಾಗಿ ಇದ್ದುಕೊಂಡು ಬರಲು ಅಪೇಕ್ಷಿಸುವುದೂ ಹಾಗಿರಲಿ, ಯುದ್ಧಮಾರ್ಗಗಳನ್ನು ಸಹ ಕಾಲಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳದೆ ಹೋದರೆ ಇವರು ಉಳಿದುಳಿಯಬಲ್ಲರೇ?

**ಸುಗ್ರೀವ:—** ಕಾಲವ್ಯತ್ಯಾಸದಿಂದ ಈಗ ನಮಗಾಗಿರುವ ಹೆಚ್ಚು ಕಷ್ಟವೇನು?

**ಮಯ:—** ಈಗ ಬರುಬರುತ್ತ ಕಲಿಯ ಪ್ರಾಬಲ್ಯವು ಅಧಿಕವಾಗುತ್ತಿದೆ. ಕಲಿಮಹಿಮೆಯಿಂದ ವಿಶ್ವದಲ್ಲಿ ದೇವಾಸುರರ ಪ್ರಭಾವವು ಕುಗ್ಗಿ, ಮನುಷ್ಯರ ಚೇಷ್ಟೆಯು ಹೆಚ್ಚುತ್ತಿದೆ. ಹಿಂದೆ ಮನುಷ್ಯಕುಲವು ಕ್ರಿಮಿಕೀಟಸದೃಶವಾಗಿ ದುರ್ಬಲವಾಗಿತ್ತು; ಲೋಕಾಧಿಪತ್ಯವು ದೇವಾಸುರರ ಮಾನ್ಯವಾಗಿತ್ತು. ಮನುಷ್ಯರಲ್ಲಿ ಎಲ್ಲಿಯೋ ಮಾತ್ರ ಕೆಲವರು ತಲೆಯೆತ್ತಿಕೊಂಡು, ವರಾನುಗ್ರಹದಿಂದಲೂ ಮಂತ್ರ, ತಂತ್ರ, ತಪಸ್ಸಿದ್ಧಿಗಳಿಂದಲೂ ದಿವ್ಯಶಕ್ತಿಗಳನ್ನು ಪಡೆದು, ದೇವಾಸುರರಂತೆ ಮೆರೆಯುತ್ತಿದ್ದರು. ಯುದ್ಧವೆಲ್ಲವೂ ಮಂತ್ರಾಸ್ತ್ರಗಳ ಮೂಲಕ, ಸಾವಿರಾರು ಆನೆಗಳ ಬಲವುಳ್ಳ ವ್ಯಕ್ತಿಗಳಿಂದ ನಿರ್ವಹಿಸಲ್ಪಡುತ್ತಿತ್ತು. ಪಾಮರಜನತೆಯು ಅಚೇತನವಾಗಿ ಈ ದಿವ್ಯವ್ಯಕ್ತಿಗಳ ಮಾತಿಗೆ ಪ್ರತಿಯಿಲ್ಲದೆ ವಿಧೇಯವಾಗಿ ತಗ್ಗಿ ನಡೆಯುತ್ತಿದ್ದಿತು. ಕಾಲಧರ್ಮದ ವ್ಯತ್ಯಾಸದಿಂದ ಈಗ ಭೂಲೋಕದ ಮನುಷ್ಯಜಾತಿಯವರು ಸಾರ್ವತ್ರಿಕವಾಗಿ ಜಾಗೃತಿ ಪಡೆಯುತ್ತ ಬರುತ್ತಿರುವರು. ಕಲಿಯು ಪ್ರಬಲಿಸಿರುವಾಗ ಮಣಿ–ಮಂತ್ರ–ತಂತ್ರ–

ಅಸ್ತ್ರ—ತಪಸ್ಸು—ಅಮಾನುಷ ಸಿದ್ಧಿಗಳೊಂದೂ ಫಲಿಸುವುದಿಲ್ಲ. ಅಸ್ತ್ರವು ಶಸ್ತ್ರದಿಂದ ಪರಾಜಯವನ್ನು ಪಡೆಯುತ್ತಿದೆ. ಪ್ರಜಾವ್ಯೂಹದ ಮುಂದೆ ದಿವ್ಯವ್ಯಕ್ತಿಗಳ ಆಟವೇನೂ ಸಾಗುತ್ತಿಲ್ಲ. ಸಕಲರೂ ಸ್ವಾತಂತ್ರ್ಯವನ್ನು ಬಯಸಿ, ಎಲ್ಲವನ್ನೂ ಸ್ವಂತವಾಗಿ ಯೋಚಿಸಿ ತಿಳಿದು ಕೆಲಸ ಮಾಡಲು ಪ್ರಯತ್ನಿಸುತ್ತಿರುವರು. ಪ್ರತಿಯೊಂದಕ್ಕೂ ಕಾರಣವನ್ನು ಕೇಳಿ ತಿಳಿಯುವ ಪ್ರವೃತ್ತಿಯು ಜನರಲ್ಲಿ ಹುಟ್ಟಿದೆ. ಜಪತಪಾದಿ ಕಾರ್ಯಗಳಿಗಿಂತಲೂ ಬುದ್ಧಿಕಾರ್ಯವು ಹೆಚ್ಚಿದೆ. ಇಂತಹ ಪ್ರಜಾಸಮೂಹವನ್ನು ಜಯಿಸಿ ಆಳಬೇಕಾದರೆ, ವಿದ್ಯೆಯ ಸಹಾಯವೂ ಹೊಸ ಮಾರ್ಗಗಳೂ ಇಲ್ಲದೆ ನಿರ್ವಾಹವಿಲ್ಲ. ಇದನ್ನರಿತು ಮಹಾತ್ಮರಾದ ಶುಕ್ರಾಚಾರ್ಯರು ನೂತನಮಾರ್ಗದಿಂದ ನಮ್ಮ ಉದ್ಧಾರಪ್ರಯತ್ನವನ್ನು ನಡೆಯಿಸುತ್ತಿರುವರು.

**ಸುಗ್ರಿವ:**— ಆದರೆ ಈ ಹೊಸಮಾರ್ಗದಿಂದ ನಮ್ಮ ಮೂಲಧನವಾದ ಕ್ಷಾತ್ರಸ್ವಭಾವವೇ ಮಾಯವಾದರೆ ಗತಿ ಏನು?

**ಮಯ:**— ಈ ಹೊಸ ಮಾರ್ಗವು ಕ್ಷಾತ್ರಸ್ವಭಾವವನ್ನು ನಾಶಪಡಿಸುವುದಿಲ್ಲ. ಈಗ ಯುದ್ಧಬಲವು ಸಾಮುದಾಯಿಕ ಬಲದಿಂದ ಹುಟ್ಟುವುದೇ ಹೊರತು ವ್ಯಕ್ತಿಬಲದಿಂದ ಹುಟ್ಟಲಾರದು. ಈ ಕಾಲದಲ್ಲಿ ನಾವು ಉದ್ಧಾರಹೊಂದಬೇಕಾದರೆ ಪ್ರಜಾಸಮಾಜವನ್ನು ದೃಢವಾಗಿ ವ್ಯವಸ್ಥೆಗೊಳಿಸಿಕೊಂಡು, ಸಾಮುದಾಯಿಕವಾಗಿ ಕೆಲಸಮಾಡಬೇಕು.

**ಹಸ್ತಿ:**— ಈ ಹೊಸಮಾರ್ಗವು ಹರಿಯ ವಿರೋಧವನ್ನು ಪರಿಹರಿಸಬಲ್ಲುದೋ? ಹರಿವಿರೋಧವಿರುವವರೆಗೂ ನಮ್ಮ ಅಭ್ಯುದಯವು ನೆಲೆಯಾಗಿ ನಿಲ್ಲಲು ಸಾಧ್ಯವಿಲ್ಲ. ಮಧು, ಕೈಟಭ, ಸೋಮುಕ, ಹಿರಣ್ಯಾಕ್ಷ, ಹಿರಣ್ಯಕಶಿಪು, ಕಾಲನೇಮಿ ಮೊದಲಾದ ವೀರಾಧಿವೀರರ ಹುಟ್ಟನ್ನಡಗಿಸಿದ ಹರಿಯು, ನಿನ್ನ ಮಕ್ಕಳಾಟಿಕೆಯ ಕೋಟೆ-ಕೊತ್ತಲಗಳನ್ನೂ ಪ್ರಾಕೃತಸೇನೆಯನ್ನೂ ಸಾಮುದಾಯಿಕ ವ್ಯವಸ್ಥೆಗಳನ್ನೂ ಧ್ವಂಸಮಾಡಲಾರನೇ? ನಮ್ಮ ಏಳಿಗೆಗೆ ಕಂಟಕನಾಗಿರುವವನು ಹರಿಯೇ ಹೊರತು ಕಾಲಪುರುಷನಲ್ಲ.

**ಮಯ:**— ಈ ಹೊಸ ಮಾರ್ಗದಿಂದ ಮತ್ತಾವ ಫಲವಿಲ್ಲದಿದ್ದರೂ ನಮ್ಮ ಕುಲದ ಅಶೇಷವ್ಯಕ್ತಿಗಳ ಶಕ್ತಿಸಾಮರ್ಥ್ಯಗಳೂ ಪ್ರಕಾಶಕ್ಕೆ ಬರಲು ಅವಕಾಶವಿದೆ. ಇದರಿಂದ ನಮಗೆ ಅನಂತ ಪ್ರಯೋಜನವೂ ಪರರಿಗೆ ಅತ್ಯಂತ ಉಪಕಾರವೂ ಉಂಟಾಗುವುದು. ನಮ್ಮ ಉಚ್ಛ್ರಾಯವು ಶಾಶ್ವತವಾಗಿ ನಿಲ್ಲದೆ, ಹಿಂದಣಂತೆ ಮಿಂಚಿ ಮಾಯವಾದರೂ, ಈಗ ನಮ್ಮನ್ನು ಲೋಕವು, ಶಪಿಸುತ್ತಿರುವುದಾದರೂ ತಪ್ಪಿ, ನಮ್ಮ ಉಪಕಾರವನ್ನದು ಹಾಡಿ ಹರಸಿ ಕೊಂಡಾಡುತ್ತ ಬರುವುದು.

**ಕರಾಳ:**— ಲೋಕಕ್ಕೆ ಉಪಕಾರ ಮಾಡುವುದಕ್ಕಾಗಿ ನಾವು ಹುಟ್ಟಿಲ್ಲ.

**ಹಸ್ತಿ:**— ಉಪಕಾರದ ಮಾತು ಹಾಳಾಗಲಿ. ನಿನ್ನ ಈ ಹೊಸ ಮಾರ್ಗದಿಂದ ಹರಿಯನ್ನು ಜಯಿಸಲಾದೀತೇ ಇಲ್ಲವೇ ಹೇಳು?

**ಮಯ:**— ಅದನ್ನು ನಾನು ಹೇಳಲಾರೆ. ಆದರೆ ಹರಿಯ ವಿರೋಧವು ಪರಿಹಾರವಾಗಲು ಈ ಮಾರ್ಗವನ್ನು ಬಿಟ್ಟರೆ ಬೇರೆ ಉಪಾಯವಿಲ್ಲ.

**ಸುಗ್ರೀವ:**— ಅದು ಹೇಗೆ?

**ಮಯ:**— ಹರಿಗೂ ನಮಗೂ ವಿರೋಧ ಹುಟ್ಟಲು ಕಾರಣವೇನು? ಅಸುರರು ಸ್ವೇಚ್ಛಾವರ್ತನೆಯಿಂದ ವಿಶ್ವವ್ಯವಸ್ಥೆಯ ನಿಯಮಗಳನ್ನು ಮೀರಲು ಪ್ರಯತ್ನಿಸಿ, ಹರಿಯ ಕೈಯಲ್ಲಿ ಪೆಟ್ಟುತಿನ್ನುತ್ತಿರುವರು. ಹರಿ ಎಂದರೆ ಯಾರೆಂದು ತಿಳಿದಿರುವಿರಿ? "ವಿಶ್ವಂ ವಿಷ್ಣುಃ" ಎಂಬಂತೆ ಈ ವಿಶ್ವ (Cosmos) ವೇ ಹರಿಯು. ವಿಶ್ವವೆಂದರೆ ನಾವು ನೋಡುತ್ತಿರುವ ಕಲ್ಲು, ಮಣ್ಣು, ಮರಮೊದಲಾದ ವಸ್ತುಗಳ ಸಮೂಹವಲ್ಲ. ಈ ವಸ್ತುಗಳಿಗೆ ಆಧಾರವಾಗಿರುವ ಪರಮಾಣುದ್ರವ್ಯಗಳು ಯಾವಾಗಲೂ ಒಂದೇ ಸ್ವರೂಪದಲ್ಲಿವೆ. ಇವು ಒಂದು ಕಾಲದಲ್ಲಿ ಚಲನೆ, ವಿಭಾಗ, ಕ್ರಿಯೆಗಳಿಲ್ಲದೆ ಅಖಂಡವಾದ ಒಂದು ಮುದ್ದೆಯಾಗಿರಬಹುದು. ಈ ಅವ್ಯಕ್ತಾವಸ್ಥೆಯಲ್ಲಿ "ವಿಶ್ವ" ವಿಲ್ಲ. ಈ ಪರಮಾಣುದ್ರವ್ಯಗಳು ವ್ಯಕ್ತಾವಸ್ಥೆಯನ್ನು ಪಡೆದು, ನಾನಾರೂಪವಾಗಿ ವಿಭಾಗಗೊಂಡು, ನಿಯಮಾನುಸಾರ ಚಲನೆಯನ್ನೂ ಕ್ರಿಯೆಯನ್ನೂ ತೋರ್ಪ-

ಡಿಸಿದರೆ ಅವುಗಳಲ್ಲಿ ವ್ಯವಸ್ಥೆ (Organisation) ಎಂಬ ಅವಸ್ಥಾವಿಶೇಷವು ಹುಟ್ಟುತ್ತದೆ. ಈ ಅವಸ್ಥಾವಿಶೇಷವು 'ವಿಶ್ವ' ಎನ್ನಿಸುವುದು. ಲೋಕ ವ್ಯವಸ್ಥೆಯೇ ವಿಶ್ವವು. ವ್ಯವಸ್ಥೆ ಎಂದರೆ ಕ್ರಮ, ನಿಯಮ ಎಂದು ಅರ್ಥ. ವಿಶ್ವವು ಸುಸೂತ್ರವಾದ ಅಚಲ ನಿಯಮಗಳಿಂದ ರಚಿತವಾಗಿದೆ. ಈ ನಿಯಮಪಂಜರವೇ ವಿಶ್ವವೆನ್ನಿಸುವುದು. ಇದೇ ಹರಿಗೆ ಒಡಲಾಗಿದೆ. ಲೋಕವ್ಯವಸ್ಥೆಗೆ ಆಧಾರವಾದ ನಿಯಮಗಳನ್ನು ವಿರೋಧಿಸುವುದನ್ನು ಬಿಟ್ಟು, ಹೆಚ್ಚುಹೆಚ್ಚಾಗಿ ಅನುಸರಿಸಿ, ಉಪಯೋಗಪಡಿಸಿಕೊಳ್ಳತಕ್ಕವರಿಗೆ ಹರಿಯು ವಶನಾಗುವನು. ಆದಿಕಾಲದಿಂದಲೂ ದೇವತೆಗಳು ವ್ಯವಸ್ಥೆಯನ್ನು ಪುರಸ್ಕರಿಸುತ್ತಲೂ ಅಸುರರು ತಿರಸ್ಕರಿಸುತ್ತಲೂ ಬಂದಿರುವರು. ವ್ಯವಸ್ಥೆಯನ್ನು ಪುರಸ್ಕರಿಸುವುದು ದೈವೀ ಸಂಪತ್ತೆಂದೂ, ನಿರಾಕರಿಸುವುದು ಆಸುರೀ ಸಂಪತ್ತೆಂದೂ ಹೇಳಲ್ಪಟ್ಟಿದೆ. ವ್ಯಕ್ತಿಗಳು ಅನೇಕ ಶಕ್ತಿಸಾಧನ ಸಂಪನ್ನರಾಗಿ ಹುಟ್ಟುವರು. ಈ ಶಕ್ತಿಸಾಧನಗಳು ವಿವಿಧ ಇಷ್ಟಾನಿಷ್ಟ ಪ್ರವೃತ್ತಿಗಳನ್ನೂ ಕ್ರಿಯೆಗಳನ್ನೂ ಸರ್ವದಾ ಹುಟ್ಟಿಸುವುವು. ಈ ಪ್ರವೃತ್ತಿಗಳೂ ಕ್ರಿಯೆಗಳೂ ಸ್ವೇಚ್ಛೆಯಾಗಿ ಪ್ರವಹಿಸಿದರೆ ಆಸುರೀ ಸಂಪತ್ತು ಹುಟ್ಟುವುದು. ಅತಿ ಸುಲಭವಾಗಿ ಹುಟ್ಟಿ ಬಳೆಯುತಕ್ಕ ಕಾಮಕ್ರೋಧಾದಿಗಳು ಕೆಲವು ಸಂದರ್ಭಗಳಲ್ಲಿ ಸುಗುಣವಾಗುವುವು; ಬಹುಸಂದರ್ಭಗಳಲ್ಲಿ ದುರ್ಗುಣವಾಗುವುವು. ಈ ಸಂದರ್ಭಗಳನ್ನು ಅರಿತು, ಇವುಗಳಲ್ಲಿ ನಿಯಮವನ್ನು ಕಲ್ಪಿಸಿ, ನಮ್ಮ ಪ್ರಕೃತಿಯಲ್ಲಿ ವ್ಯವಸ್ಥೆಯನ್ನು ಸ್ಥಾಪಿಸಿದರೆ, ದೈವೀಸಂಪತ್ತು ಪ್ರಾಪ್ತಿಸುವುದು. ವ್ಯಕ್ತಿಯು ತನ್ನ ಅಂತಃಪ್ರಕೃತಿಯಲ್ಲೂ ಬಹಿಃಪ್ರಕೃತಿಯಲ್ಲೂ ವ್ಯವಸ್ಥೆಯನ್ನು ಪುರಸ್ಕರಿಸಿ, ತದಾಧಾರ ನಿಯಮಗಳನ್ನು ಪರಿಪಾಲಿಸುವುದರಿಂದ ಹರಿಯನ್ನು ಸಾಧಿಸುವನು. ನಮ್ಮ ಅಸುರಕುಲದವರು ಯಾವ ತರದ ವ್ಯವಸ್ಥೆಗೂ ಸಹಿಸದೆ, ನಿಯಮಬದ್ಧರಾಗಿ ಜೀವಿಸುವುದಕ್ಕೆ ಅಸಮ್ಮತರಾಗಿ, ಪರರ ವ್ಯವಸ್ಥಾಮಯ ಜೀವನವನ್ನು ಮುರಿಯುವುದಕ್ಕೆ ಹವಣಿಸುತ್ತಿರುವುದರಿಂದ, ಹರಿಗೆ ಸಹಜವೈರಿಗಳಾಗಿ ಪರಿಣಮಿಸಿರುವರು. ಸಂತತವೂ ಅನೂಚಾನವೂ ಶ್ರಮದಾಯಕವೂ ಆದ ಪ್ರಯತ್ನದಿಂದ ಭಾಗ್ಯಶಾಲಿಗಳಾಗುವುದಕ್ಕೆ ಒಡಂಬಡದೆ, ನಾವು ತಪಸ್ಸಿ

ನಿಂದ ಇಂದ್ರಜಾಲದಂತೆ ಒಂದೇ ಸಲಕ್ಕೆ ದಿವ್ಯಶಕ್ತಿಗಳನ್ನು ಪಡೆದು, ವ್ಯವಸ್ಥಾತೀತವಾಗಿ ಮೆರೆಯಲು ಬಯಸುತ್ತಿದ್ದೇವೆ. ವೈದೀಮಾರ್ಗ ವನ್ನು ಅವಲಂಬಿಸತಕ್ಕ ವ್ಯಕ್ತಿಗಳಿಗೆ ಮೋಕ್ಷದೆಸೆಯಲ್ಲಿ ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಾನಂದತ್ವಾದಿಗಳು ಸಿದ್ಧಿಸಿದರೂ ಅವರು ಪರಮಾತ್ಮ ನನ್ನು ಮೀರಿ ಹೋಗದೆ ನಿಯತಿಯಿಂದ ಜೀವಿಸುವರು. ದೇವತೆಗಳು ಯಾವ ದೆಸೆಯಲ್ಲೂ ವಿಶ್ವದ ಋತವನ್ನು ಮೀರಲು ಬಯಸದೆ ಹರಿಗೆ ಪ್ರಿಯರಾಗಿರುವರು. ಸತ್ಯಋತವೇ ಧ್ಯೇಯವಾಗಿರುವ ನಾವು ಹರಿಗೆ ವೈರಿಗಳಾಗಿರುವುದರಲ್ಲಿ ಅತಿಶಯವೇನು? ಇನ್ನು ಮುಂದೆ ದಿವ್ಯವ್ಯಕ್ತಿಗಳ ಆಟವು ಸಾಗುವುದಿಲ್ಲ. ಸಾಮುದಾಯಿಕವಾಗಿ ಬಲವನ್ನು ಸಂಪಾದಿ ಸದವರು ನಾಶವಾಗುವರು. ವ್ಯವಸ್ಥಾಪಕ ಶಕ್ತಿಯಲ್ಲಿ ಯಾರು ಏಳಿಗೆ ಯನ್ನು ಪಡೆಯುವರೋ ಅವರಿಗೆ ಹರಿಯು ವಶನಾಗುವನು.

**ಕರಾಳ:**— ಭೀಷಣ, ನಾವು ಹರಿಯ ಸಂಕಲ್ಪದಂತೆ ನಡೆಯಬೇ ಕೆಂದು ಈ ಮುದಿಮಯನು ಏನು ಧೈರ್ಯವಾಗಿ ಬೊಗಳುತ್ತಿರುವನು!

**ಭೀಷಣ:**— ಕೆಲಸಕ್ಕೆ ಬಾರದ ಒಡ ಬಡಗಿಯು ವೇದಾಂತಕ್ಕೂ ರಾಜಮಂತ್ರಕ್ಕೂ ತಲೆಹಾಕಿದರೆ ನಮ್ಮ ಗತಿ ಏನಾಗಬೇಕು?

**ಕರಾಳ:**— ಈ ಮುದಿಗೂಬ್ಬಗಳ ಮೇಲೆ ನಮ್ಮ ಯುವಕ ಮಂಡಲಿಯವರು ಕತ್ತಿಕಟ್ಟಿ ನಿಲ್ಲದಿದ್ದರೆ, ಅವರು ನಮ್ಮ ಅಸುರಕುಲ ವನ್ನು ಖಂಡಿತ ಮುಳುಗಿಸುವರು. ಭೀಷಣ, ನಡೆನಡೆ, ಯುವಕ ಸಮುದಾಯವನ್ನು ಈಗಲೇ ಇವರ ಮೇಲೆ ಬೀಳುವಂತೆ ಎಬ್ಬಿಸೋಣ.

**ಹಸ್ತಿ:**— ಹಾಗೆಯೇ ಸರಿ (ಯುವಕರೆಲ್ಲರೂ ಹೋಗುವರು)

**ಮಯ:**— ಮಹಾತ್ಮರಾದ ಶುಕ್ರಾಚಾರ್ಯರು ಇಂತಹ ದಡ್ಡ ರನ್ನು ಕಟ್ಟಿಕೊಂಡು ಏನು ಮಾಡಬಲ್ಲರು? ನಮ್ಮ ರಾಜಕುಮಾರರು ತಪಸ್ಸಿಗೆ ಹೋಗಿರುವರು. ಈ ಮೂಢ ಯುವಕರು ಈಗ ಅನಾಹುತ ಮಾಡುವುದರಲ್ಲಿರುವರು.

**ಸುಗ್ರೀವ.**— ಸಂಗತಿಯನ್ನು ಗುರುಗಳಿಗೆ ನಿವೇದಿಸುವುದು ಉತ್ತಮ.

**ಮಯ:**— ಹಾಗೆಯೇ ಸರಿ, ಹೋಗೋಣ (ಹೋಗುವರು)

# ದ್ವಿತೀಯ ಚಿತ್ರ

**ಸ್ಥಳ**— ಒಂದು ಪುಣ್ಯಾಶ್ರಮದಲ್ಲಿ ತಾರಕಾಕ್ಷ, ಕಮಲಲೋಚನ, ವಿದ್ಯುನ್ಮಾಲಿಗಳು ತಪಸ್ಸು ಮಾಡುತ್ತಿರುವರು. ಬ್ರಹ್ಮದೇವನು ಅವರಿಗೆ ಪ್ರತ್ಯಕ್ಷನಾಗುವನು.

**ಬ್ರಹ್ಮ:**— ವತ್ಸರೇ, ನಿಮ್ಮ ತಪಸ್ಸಿಗೆ ಮೆಚ್ಚಿದೆನು. ವಿದ್ಯಾದೇವಿಯನ್ನು ಒಲಿಸಿಕೊಂಡು, ನೀವು ಈ ಮೊದಲೇ ನನ್ನ ಪ್ರೀತಿಗೆ ಪಾತ್ರರಾಗಿದ್ದೀರಿ.

**ತಾರಕ:**— ನಿನ್ನ ಅಭಿಮಾನವು ನಮ್ಮಲ್ಲಿ ಶಾಶ್ವತವಾಗಿರಬೇಕೆಂಬುದೇ ನಮ್ಮ ಬಿನ್ನಹವು.

**ಬ್ರಹ್ಮ:**—ನೀವು ವಿದ್ಯಾದೇವಿಯ ಉಪಾಸಕರಾಗಿರುವ ವರೆಗೂ ನನ್ನ ಅಭಿಮಾನವು ನಿಮ್ಮಲ್ಲಿ ಸ್ಥಿರವಾಗಿರುವುದು. ವಿದ್ಯೆಯ ಸಹಾಯವಿದ್ದರೂ ನೀವು ತಪಸ್ಸನ್ನೇಕೆ ಆಚರಿಸಿದಿರಿ?

**ಕಮಲ:**— ನಮ್ಮ ಅಸುರರು ಹುಟ್ಟಿದೊಡನೆಯೆ ದೊಡ್ಡವರಾಗಿ ಬೆಳೆಯುವ ಪ್ರಕೃತಿಯುಳ್ಳವರು. ನಮ್ಮ ಬಯಕೆಗಳು ಮೊಳೆತೊಡನೆಯೆ ಸಿದ್ಧಿಸಬೇಕೆಂದು ನಾವು ಹಾರಯಿಸತಕ್ಕವರು. ಇದು ತಪಸ್ಸಿನಿಂದ ಮಾತ್ರ ಸಾಧ್ಯ. ನದಿ ದಾಟಬೇಕಾದವನು ವಿದ್ಯೆಯನ್ನು ಆಶ್ರಯಿಸಿದರೆ, ದುರ್ಘಟ ಪ್ರಯತ್ನದಿಂದ ಈಜಬೇಕು, ಇಲ್ಲವೇ ದೋಣಿ ಅಥವಾ ಸೇತುವೆಯನ್ನು ಕಟ್ಟಬೇಕು; ತಪಸ್ಸನ್ನು ಆಶ್ರಯಿಸಿದರೆ, ಆಕಾಶಗಮನದಿಂದ ಎದುರು ದಡವನ್ನು ಸೇರಬಹುದು, ಅಥವಾ ನೀರಿನ ಮೇಲೆ ನಡೆದುಕೊಂಡೇ ಹೋಗಬಹುದು.

**ಬ್ರಹ್ಮ:**— ಆಕಸ್ಮಿಕವಾಗಿ ಪ್ರಾಪ್ತವಾಗುವ ಫಲವು ಆಕಸ್ಮಿಕ

ವಾಗಿ ನಷ್ಟವಾಗುವುದು. ಯಾವ ವರಕ್ಕಾಗಿ ನೀವು ಈಗ ತಪಸ್ಸನ್ನಾಚರಿಸಿದಿರಿ?

**ತಾರಕ:**— ವಿಧಾತ, ನಮಗೆ ಅವಧ್ಯತ್ವವನ್ನು ದಯೆಪಾಲಿಸು.

**ವಿದ್ಯು:**— ಪ್ರಭೋ, ದೀನವಾಗಿರುವ ಅಸುರಕುಲವನ್ನು ಅನುಗ್ರಹಿಸಿ, ಈ ಕೋರಿಕೆಯನ್ನು ನೆರವೇರಿಸು.

**ಬ್ರಹ್ಮ:**— ಬಾಲಕರೇ, ನಿಮ್ಮ ಕುಲದವರು ಹಿಂದೆ ವರಗಳನ್ನು ಕೇಳಿದಾಗ, ನಾನು ಮರುಮಾತಾಡದೆ ಕೊಟ್ಟುಹೋಗುತ್ತಿದ್ದೆನು. ಈಗಲೂ ಹಾಗೆಯೇ ಮಾಡಬಹುದು. ಆದರೆ ಯಾತ್ತಾವ ಅಸುರನೂ ನಿಮ್ಮಂತೆ ಸರಸ್ವತಿಯನ್ನು ಒಲಿಸಿಕೊಂಡು, ವಿದ್ಯಾಬುದ್ಧಿಗರಿಷ್ಠನಾಗಿ ಆನಂತರ ನನ್ನನ್ನು ಆರಾಧಿಸಲಿಲ್ಲ. ಈ ಕಾರಣದಿಂದ ಅವರು ಪಡೆದ ವರಗಳೆಲ್ಲವೂ ತಂತ್ರದಿಂದ ವಿಫಲವಾಡಲ್ಪಟ್ಟುವು. ಆದ್ದರಿಂದ ನೀವು ಬೇಡತಕ್ಕ ವರಗಳನ್ನು ವಿದ್ಯೆಯಿಂದ ಪರಾಮರ್ಶಿಸಿ ಪ್ರಾರ್ಥಿಸಿರಿ. ನೀವು ನನ್ನ ಅಭಿಮಾನವನ್ನು ಪುರಸ್ಕರಿಸಿರುವಿರಾದ್ದರಿಂದ ನಾನು ನಿಮಗೆ ಈ ಹಿತವಾದವನ್ನು ಹೇಳುತ್ತೇನೆ.

**ಕಮಲ:**— ಪರಮೇಷ್ಠಿಯೇ, ನಾವು ಅವಧ್ಯರಾಗದಿದ್ದರೆ, ದೇವತೆಗಳು ಹೇಗಾದರೂ ಮಾಡಿ ನಮ್ಮನ್ನು ನಾಶಮಾಡುವರು. ಆದ್ದರಿಂದ ನಮಗೆ ಈ ವರವನ್ನು ಕರುಣಿಸು.

**ಬ್ರಹ್ಮ:**— ವತ್ಸರೇ, ನೀವು ಅವಧ್ಯರಾದ ಮಾತ್ರಕ್ಕೆ ಏನು ಲಾಭ? ಯುದ್ಧದಲ್ಲಿ ನಿಮ್ಮನ್ನು ಯಾರೂ ವಧಿಸದೆ ಇರಬಹುದು. ನೀವು ರೋಗದಿಂದಲೋ ಪತನಾದಿ ಅನಾಹುತಗಳಿಂದಲೋ ವಯೋಧರ್ಮದಿಂದಲೋ ಸಾಯಬಹುದಲ್ಲವೇ?

**ವಿದ್ಯು:**— ನಿಜ, ನಿಜ! ಹಿರಣ್ಯಗರ್ಭ, ನೀನು ನಮಗೆ ಚಿರಂಜೀವಿತ್ವವನ್ನು ದಯೆಪಾಲಿಸು.

**ಬ್ರಹ್ಮ:**— ಹುಳು ಹೊಪ್ಪಟೆಗಳಂತೆ ಅನಂತಕಾಲವೂ ಬದುಕುವುದರಲ್ಲಿ ಏನು ಅತಿಶಯ? ಸಾವೊಂದಿಲ್ಲದ ಮಾತ್ರಕ್ಕೆ ಮನುಷ್ಯನು ರೋಗ, ಮುಪ್ಪು, ದುಃಖ ಇವುಗಳಿಗೆ ಸಿಕ್ಕಿಬಿದ್ದರೆ ಏನು ಸುಖಪಟ್ಟಾನು?

**ತಾರಕ:—** ಚಿರಂಜೀವಿತ್ವದ ಜತೆಗೆ ರೋಗ,ಮುಪ್ಪು ಮೊದಲಾದ ಈತಿಬಾಧೆಗಳು ತಟ್ಟದಂತೆ ನಮ್ಮ ಪ್ರಕೃತಿಯನ್ನು ವಿಕಾರರಹಿತವಾಗು ವಂತೆ ಅನುಗ್ರಹಿಸು.

**ಬ್ರಹ್ಮ:—** ನೀವೊಬ್ಬರು ಮಾತ್ರ ನೋಯಲಾರದಂತೆ ಗಟ್ಟಿ ಮುಟ್ಟಾಗಿ ನಿಂತರೆ ಸಾರ್ಥಕವೇನು ? ನಿಮಗೆ ಬೇಕಾದ ಬಂಧುಮಿತ್ರರೂ ಇಷ್ಟರೂ ಸತಿಸುತಾದಿಗಳೂ ಪ್ರಿಯವಸ್ತುಗಳೂ ನಿಮ್ಮ ಕಣ್ಣಮುಂದೆ ಪರಂಪರೆಯಾಗಿ ನಾಶವಾಗುತ್ತ ಬಂದರೆ ನಿಮಗೇನು ಸುಖ? ನಿಮ್ಮ ಪ್ರೇಮವು ಹಳೆಯ ವಸ್ತುವನ್ನು ಕಳೆದುಕೊಂಡು ಹೊಸ ವಸ್ತುವನ್ನು ಆಶ್ರಯಿಸುತ್ತ, ಅನವರತವೂ ಪಲ್ಲಟವಾಗುತ್ತ ಬಂದರೆ ನಿಮಗೆ ನಿರ್ವಿಕಾರ ತ್ವವು ಹೇಗೆ ಸಿದ್ಧಿಸುವುದು ?

**ಕಮಲ:—**ಹಾಗಾದರೆ ನಮ್ಮ ಪ್ರಕೃತಿಯಂತೆ ನಮ್ಮ ಭಾಗ್ಯಕ್ಕೂ ನಿರ್ವಿಕಾರತ್ವವನ್ನು ಕೊಡು.

**ಬ್ರಹ್ಮ:—** ಅದು ಸಿದ್ಧಿಸಬೇಕಾದರೆ ನಿಮ್ಮ ಜತೆಗೆ ಲೋಕದಲ್ಲಿ ರುವ ಸಕಲರೂ-ಸಕಲವೂ ನಿಮ್ಮಂತೆಯೇ ಚಿರಂಜೀವಿತ್ವವನ್ನು ಪಡೆಯ ಬೇಕು; ಅಥವಾ ವಿಕಾರಕ್ಕೂ ದುಃಖಕ್ಕೂ ಕಾರಣವಾಗುವ ಪ್ರೀತಿ ದ್ವೇಷಾದಿ ರಾಗಗಳನ್ನೂ ತಜ್ಜನ್ಯಕ್ರಿಯೆಗಳನ್ನೂ ನೀವು ನಿರ್ಮೂಲ ಮಾಡಬೇಕು.

**ವಿದ್ಯು:—** ಈ ಎರಡರಲ್ಲಿ ಯಾವುದರಿಂದ ನಮ್ಮ ಇಷ್ಟಾರ್ಥವು ಸಿದ್ಧಿಸುವುದೋ ಅದನ್ನು ಅನುಗ್ರಹಿಸು.

**ಬ್ರಹ್ಮ:—** ಸಕಲರೂ ಚಿರಂಜೀವಿಗಳಾಗಿ ಬಿಟ್ಟರೆ ನಿಮ್ಮ ಇಷ್ಟಾ ರ್ಥವು ನೆರವೇರಲಾರದು. ನಿಮ್ಮಂತೆಯೇ ನಿಮ್ಮ ಶತ್ರುಗಳು ಚಿರಂ ಜೀವಿಗಳೂ ನಿರ್ವಿಕಾರಭಾಗ್ಯಸಂಪನ್ನರೂ ಆದರೆ, ನೀವು ಅವರನ್ನು ನಿಗ್ರ ಹಿಸಿ ಲೋಕಾಧಿಪತ್ಯವನ್ನು ಮಾಡುವುದು ಹೇಗೆ? ಲೋಕದಲ್ಲಿರುವ ಸಕ ಲರೂ ನಿಮ್ಮಂತೆಯೇ ಆದರೆ ನಿಮ್ಮಿಂದ ಯಾರನ್ನು ಆಳಲಾದೀತು? ನಿಮಗೆ ಪರರಿಂದಾಗಲಿ ಪರರಿಗೆ ನಿಮ್ಮಿಂದಾಗಲಿ ಭಯಹರ್ಷಾದಿಗಳೊಂದೂ ಸಂಭವಿಸಲಾರವು. ಪ್ರತಿಯೊಬ್ಬರೂ ಅನ್ಯೋನ್ಯಸಂಬಂಧವಾವುದೂ

ಇರಲಾರದೆ, ಸ್ವಯಂ ಪರಿಪೂರ್ಣರಾಗಿ, ಮೃಗಗಳಂತೆ ಸರ್ವಸ್ವತಂತ್ರ ರಾಗಿ ಇದ್ದು ಬರಬೇಕಾಗುವುದು. ನೀವು ಈ ಮೃಗೀಸ್ವಾತಂತ್ರ್ಯ ಸ್ಥಿತಿಯನ್ನು ಬಯಸುತ್ತೀರಾ?

**ಕಮಲ:**— ಎಂದಿಗೂ ಇಲ್ಲ.

**ಬ್ರಹ್ಮ:**— ಹಾಗಾದರೆ ನೀವು ವೈರಾಗ್ಯವನ್ನು ಸಾಧಿಸಬೇಕು. ಕ್ರಿಯೆಗಳು ಹುಟ್ಟಿದರೆ ವಿಕಾರವು ಹುಟ್ಟುವುದು. ಪ್ರೀತಿ, ದ್ವೇಷ, ಕೋಪ, ತಾಪ ಮೊದಲಾದ ರಾಗಗಳು ಕ್ರಿಯೆಗಳನ್ನು ಹುಟ್ಟಿಸುವುವು. ಚೈತನ್ಯವು ದೇಹಸಂಬಂಧವನ್ನು ಪಡೆದಿರುವವರೆಗೂ ಜೀವಿಗಳಲ್ಲಿ ರಾಗಗಳು ತಪ್ಪದೆ ಹುಟ್ಟುವುವು. ನೀವು ನಿರ್ವಿಕಾರತ್ವವನ್ನು ಸಾಧಿಸಬೇಕಾದರೆ, ಕ್ರಿಯೆಗಳನ್ನೂ ರಾಗಗಳನ್ನೂ ಚೈತನ್ಯಚೇಷ್ಟೆಯನ್ನೂ ನಾಶಪಡಿಸಿ, ಅಚೇತನಪ್ರಾಯರಾಗಬೇಕು. ನಿಮಗೆ ಇಂತಹ ಪಾಷಾಣಮೋಕ್ಷ ಅಥವಾ ನಿರ್ವಾಣಸ್ಥಿತಿ ಬೇಕೇ?

**ವಿದ್ಯು:**— ಖಂಡಿತ ಬೇಕಿಲ್ಲ.

**ಬ್ರಹ್ಮ:**— ಪುರುಷಾರ್ಥಗಳಲ್ಲಿ ಮೋಕ್ಷವು ಶ್ರೇಷ್ಠ. ಮೋಕ್ಷವು ಈಗ ಹೇಳಿದ ಎರಡು ರೂಪಗಳಲ್ಲಿ ಇರುವುದು. ಮುಕ್ತರುಗಳು ಸ್ವಯಂ ಪರಿಪೂರ್ಣರಾಗಿ, ಮೃಗಗಳಂತೆ ಸರ್ವಸ್ವತಂತ್ರರಾಗಿರಬೇಕು; ಇಲ್ಲವೇ, ಅಚೇತನ ಪಾಷಾಣದಂತೆ ರಾಗಕ್ರಿಯಾಶೂನ್ಯವಾದ ನಿರ್ವಾಣಸ್ಥಿತಿಯಲ್ಲಿರಬೇಕು. ನಿಮಗೆ ಈ ಉಭಯರೂಪೀ ಮೋಕ್ಷವು ಬೇಡವಾದರೆ ಮತ್ತೇನು ಬೇಕು?

**ತಾರಕ:**— ಈ ದೇಹವಿರುವಾಗ ನಮಗೆ ಈ ಎರಡು ಬಗೆಯ ಮೋಕ್ಷಸ್ಥಿತಿಯೂ ಸಿದ್ಧಿಸಲಾರದು. ದೇಹತ್ಯಾಗವೇ ಮರಣವೆನ್ನಿಸುವುದು. ಮರಣವನ್ನು ಜಯಿಸುವುದಕ್ಕಾಗಿ ಸಾಹಸಪಡುತ್ತಿರುವ ನಾವು, ಈ ವಿದೇಹಮುಕ್ತಿಯನ್ನು ಸಂಗ್ರಹಿಸುವುದು ಹೇಗೆ? ನಾವು ಈ ಜನ್ಮದಲ್ಲಿ, ಈಗ ಪಡೆದಿರುವ ಶರೀರದಲ್ಲಿ ಅಮರತ್ವವನ್ನು ಪಡೆಯಬೇಕು

**ಬ್ರಹ್ಮ:**— ಅಮರತ್ವವನ್ನು ಬಯಸುವ ನೀವು ಎನ್ನುವವರು ಯಾರು? ನೀವು ಎಂದರೆ ನಿಮ್ಮ ಆತ್ಮವೇ ಅಥವಾ ನಿಮ್ಮ ದೇಹವೇ?

ನಿಮ್ಮ ಆತ್ಮವು ಸ್ವಾಭಾವಿಕವಾಗಿಯೇ ಅಮರವಾಗಿದೆ. ಆದ್ದರಿಂದ ಈಗ ನೀವು ನಿಮ್ಮ ದೇಹಕ್ಕೆ ನಿತ್ಯತ್ವವನ್ನೂ ನಿರ್ವಿಕಾರತ್ವವನ್ನೂ ಬಯಸಿ ದಂತಾಯಿತು. ದೇಹಕ್ಕೂ ಒಂದು ಪ್ರಕಾರವಾದ ಚಿರಂಜೀವಿತ್ವವುಂಟು. ನಿಮ್ಮ ಶರೀರವು ನಿಮ್ಮ ಸಂತತಿಯವರಲ್ಲೂ, ನೀವು ಮಾಡತಕ್ಕ ಪ್ರತಿ ಯೊಂದು ಕೆಲಸದಲ್ಲೂ,ನೀವು ಪಡೆಯತಕ್ಕ ಪ್ರತಿಯೊಂದು ಸಿದ್ಧಿಯಲ್ಲೂ, ನೀವು ಸಂಪಾದಿಸತಕ್ಕ ಕೀರ್ತಿಯಲ್ಲೂ ಜೀವಿಸುತ್ತಾ ಬರುವುದು. ಈಗ ನೋಡಿರಿ, ಪ್ರಹ್ಲಾದನ ಆತ್ಮವು ಬಹುಜನ್ಮಗಳಲ್ಲಿ ಎಷ್ಟೋ ಹೆಸ ರಿನ ದೇಹಗಳನ್ನು ಧರಿಸಿದ್ದರೂ, ಆ ಪ್ರಹ್ಲಾದನಾಮಕವಾದ ಜನ್ಮದಿಂದ ಮಾತ್ರವೇ ಹೆಸರುಗೊಂಡಿರುವುದು. ಆ ಆತ್ಮವನ್ನು ನಾವು ಅದರ ಮತ್ತಾವ ಜನ್ಮದ ಹೆಸರಿನಿಂದಲೂ ಅವರ ಬೇರಾವ ದೇಹದ ಕಾರ್ಯ ದಿಂದಲೂ ಅಂಕಿತ ಮಾಡಲು ಅಶಕ್ತರಾಗಿದ್ದೇವೆ. ಹೀಗೆಯೇ ನೀವು ನಿಮ್ಮ ತನುಮನಧನಗಳನ್ನು ಲೋಕಹಿತಕ್ಕಾಗಿ ಸಮರ್ಪಣೆ ಮಾಡಿ, ಆಚಂದ್ರಾರ್ಕ ಕೀರ್ತಿಶಾಲಿಗಳಾಗಿ, ನಿಮ್ಮ ಈಗಿನ ಜನ್ಮಕ್ಕೆ ಅಮರತ್ವ ವನ್ನು ಕಲ್ಪಿಸಬಹುದು.

**ತಾರಕ:**—ವ್ಯಕ್ತಿಯಲ್ಲಿ ಆತ್ಮ ಮತ್ತು ದೇಹ ಎಂಬ ಎರಡು ಭಾಗ ಗಳಿವೆ. ಆತ್ಮ ಒಂದಕ್ಕೆ ಮಾತ್ರ ಅಮರತ್ವವನ್ನು ಸಂಪಾದಿಸಿದರೆ 'ವಿದೇಹ ಮುಕ್ತಿ' ಎಂಬ ಸ್ಥಿತಿಯು ಪ್ರಾಪ್ತವಾಗುವುದು; ದೇಹ ಒಂದಕ್ಕೆ ಮಾತ್ರ ಅಮರತ್ವವನ್ನು ಸಂಪಾದಿಸಿದರೆ 'ಕೀರ್ತಿಜನ್ಮ'ಎಂಬ ಸ್ಥಿತಿ ಪ್ರಾಪ್ತವಾಗು ವುದು. ಈ ಎರಡು ಭಾಗಗಳಿಗೂ ಪೃಥಕ್ಕಾಗಿ ಅಮರತ್ವವನ್ನು ಬಯ ಸದೆ, ಏಕತ್ರವಾಗಿ ಅಮರತ್ವವು ಉಂಟಾಗಬೇಕೆಂದು ನಾನು ಹಾರಯಿ ಸುತ್ತೇನೆ.

**ಬ್ರಹ್ಮ:**— ದೇಹಾತ್ಮಗಳೆರಡಕ್ಕೂ ಏಕಕಾಲದಲ್ಲಿ ಅಮರತ್ವವು ಲಭಿಸುವುದು ದುರ್ಲಭ. ಅವು ಒಂದು ಮತ್ತೊಂದರ ಅಭಿವೃದ್ಧಿಗೆ ಬಾಧಕಪಡಿಸುತ್ತವೆ. ಆದ್ದರಿಂದ ಕೆಲವರು ದೇಹವನ್ನೂ ಪ್ರಕೃತಿ ಯನ್ನೂ ಉದಾಸೀನ ಮಾಡಿ, ಆಧ್ಯಾತ್ಮಿಕಾಭಿವೃದ್ಧಿಯೊಂದಕ್ಕೆ ಮಾತ್ರ ಪ್ರಯತ್ನಪಡುವರು ಮತ್ತೆ ಕೆಲವರು ಆತ್ಮವನ್ನು ಉದಾಸೀನಮಾಡಿ, ಆಧಿಭೌತಿಕಾಭಿವೃದ್ಧಿಯನ್ನು ಮಾತ್ರ ಪುರಸ್ಕರಿಸುವರು.

**ತಾರಕ:**— ಈ ಎರಡು ಬಗೆಯಾದ ಅಭಿವೃದ್ಧಿಯೂ ಒಂದಾಗಿ ಸೇರಿ, ದೇಹಾತ್ಮಗಳೆರಡೂ ಅಮೃತತ್ವವನ್ನು ಪಡೆಯುವ ಬಗೆ ಹೇಗೆ?

**ಬ್ರಹ್ಮ:**— ಅದು ಪರಮರಹಸ್ಯವಾದ ವಿಷಯವು.

**ಕಮಲ:**— ಪಿತಾಮಹ, ನೀನು ಅದನ್ನು ನಮಗೆ ಅನುಗ್ರಹಿಸು.

**ಬ್ರಹ್ಮ:**— ಬಾಲರೇ, ನಿಮ್ಮ ಆಶೆಯು ಪೂರವಿಲ್ಲದ್ದು.

**ವಿದ್ಯು:**— ಆತ್ಮಭೂ, ಅದನ್ನು ನೀನಲ್ಲದೆ ಮತ್ತಾರೂ ಪೂರ್ತಿಗೊಳಿಸಲಾರರು.

**ಬ್ರಹ್ಮ:**— ಹಾಗಾದರೆ ಕೇಳಿರಿ. ಪರಸ್ಪರ ಬೇರೆಬೇರೆಯಾಗಿರುವ ದೇಹವೂ ಆತ್ಮವೂ ಅಂತರಾತ್ಮನೂ ಒಂದಾಗಿ ಸಮ್ಮಿಳಿತವಾಗುವುದರಿಂದ ಹೊಸಜಾತಿಯ ಮತ್ತೊಂದು ಸಮಷ್ಟಿ (Synthesis) ವಸ್ತುವು ಹುಟ್ಟುವುದು. ಈ ಸಮಷ್ಟಿವಸ್ತುವು ಅಮರವಾಗಿರಬಲ್ಲುದು. ತನ್ಮೂಲಕ ಅದರ ಅಂಗಗಳಾದ ದೇಹಾತ್ಮಗಳೆರಡಕ್ಕೂ ಏಕತ್ರ ಅಮೃತತ್ವವು ಸಿದ್ಧಿಸಬಲ್ಲುದು.

**ಕಮಲ:**— ಈ ಸಮಷ್ಟಿವಸ್ತುವು ಯಾವುದು?

**ಬ್ರಹ್ಮ:**— ಲೋಕಸಮಾಜವೇ ದೇಹಾತ್ಮ-ಪರಮಾತ್ಮರ ಸಮಷ್ಟಿಯಾಗಿದೆ. ವ್ಯಕ್ತಿಯು ಸಾಯುವುದು; ಸಮಾಜವು ಅಮರವಾಗಿರುವುದು. ವ್ಯಕ್ತಿಯು ಅಶಕ್ತನು, ಮೂಢನು, ಏಕದೇಶಸ್ಥನು; ಸಮಾಜವು ಸರ್ವಶಕ್ತವೂ ಸರ್ವಜ್ಞವೂ ಸರ್ವವ್ಯಾಪಿಯೂ ಆಗಿರುವುದು. ವ್ಯಕ್ತಿಯ ಹುಟ್ಟು ಸಾವು, ರೋಗರುಜೆ, ವಿದ್ಯೆ, ಸಂಪತ್ತು, ಪದವಿ, ಕರ್ಮ, ಸುಖದುಃಖ, ಭೋಗಭಾಗ್ಯಗಳೆಲ್ಲಕ್ಕೂ ಅವನ ಸಮಾಜವೇ ಕಾರಣಕರ್ತೃವಾಗಿದೆ ಸಮಾಜವಿಲ್ಲದಿದ್ದರೆ ಯಾವ ಆತ್ಮಗುಣವೂ ಹುಟ್ಟಿ ಬಳೆಯಲಾರದು. ನಿರ್ಮಾನುಷಾರಣ್ಯದಲ್ಲಿ ಏಕಾಕಿಯಾಗಿ ಜೀವಿಸತಕ್ಕ ಮನಿಯು ಭಾಷೆ, ಸಭ್ಯತೆ, ಮಾನಾಪಮಾನ, ದಯೆ, ಪರೋಪಕಾರ, ಅಹಿಂಸೆ, ಸತ್ಯವಚನ, ಅಸ್ತೇಯ, ಇಂದ್ರಿಯನಿಗ್ರಹ ಮೊದಲಾದ ಯಾವುದೊಂದನ್ನು ಸಹ ಕಲಿಯಲಾರನು; ಅವನಿಗೆ ಇವುಗಳ ಆವಶ್ಯಕತೆ ಸ್ವಲ್ಪವೂ ಇಲ್ಲ. ಸಮಾಜವು ಇಂತಹ ಗುಣಗಳನ್ನು ವ್ಯಕ್ತಿಗೆ ಕಲ್ಪಿಸಿ

ಕಲಿಸಿ ಅವನ ಆತ್ಮಾಭಿವೃದ್ಧಿಗೆ ಕಾರಣವಾಗುವುದು. ದೇಹದ ಅಮರತ್ವಕ್ಕೂ ಸಮಾಜವೇ ಆಧಾರವಾಗಿದೆ. ವ್ಯಕ್ತಿಯ ಸಂತತಿಯೂ ಸಿದ್ಧಿ-ಸಾಹಸಗಳೂ ಕಾರ್ಯಫಲಗಳೂ ಕೀರ್ತಿಯೂ ಸಮಾಜದ ಒಡಲಿನಲ್ಲಿ ಜೀವಿಸಿಕೊಂಡು ಬರುವುವು. ದೇಹಾತ್ಮವಿಶಿಷ್ಟನಾದ ವ್ಯಕ್ತಿಗೆ ಸಮಾಜಪುರುಷನು ಅಂತರಾತ್ಮವು; ಸಮಾಜಪುರುಷನಿಗೆ ವ್ಯಕ್ತಿಯು ದೇಹವು ವ್ಯಕ್ತಿಯು ಸಮಾಜದೊಡನೆ ಸಮಷ್ಟಿಯಿಂದ ಕೆಲಸಮಾಡಿದರೆ, ತನ್ನ ಆತ್ಮವನ್ನು ಸಾಧಿಸಿ ದೇಹಾತ್ಮಗಳೆರಡಕ್ಕೂ ಚಿರಂಜೀವಿತ್ವವನ್ನು ಪಡೆಯ ಬಲ್ಲನು. ಸಮಾಜಪುರುಷನು ತನ್ನ ಒಳಗಿರುವ ವ್ಯಕ್ತಿಗಳ ಶ್ರೇಯಸ್ಸೇ ತನ್ನ ಶ್ರೇಯಸ್ಸೆಂದು ಅಂಗೀಕರಿಸಿ, ಅವರಿಂದ ಅತಿರಿಕ್ತನಾಗದೆ ತನ್ನ ಕಲ್ಯಾಣವನ್ನು ಸಾಧಿಸುವನು ಹೀಗೆ ಸಮಾಜರೂಪಿಯಾದ ಆತ್ಮವು, ತನ್ನ ಚಿರಂಜೀವಿತ್ವದಿಂದ ವ್ಯಕ್ತಿಜನ್ಮರೂಪಿಯಾದ ದೇಹಕ್ಕೆ ಚಿರಂಜೀವಿತ್ವವನ್ನು ಕಲ್ಪಿಸುವುದು. ಹಾಗೆಯೇ ದೇಹದ ಚಿರಂಜೀವಿತ್ವವು ಆತ್ಮದ ಚಿರಂಜೀವಿತ್ವವನ್ನು ಏಕಸಗೊಳಿಸುವುದು. ವ್ಯಕ್ತಿಯ ಆತ್ಮಕ್ಕೆ ಸಮಾಜಪುರುಷನು ಆತ್ಮಸ್ವರೂಪನಾಗಿರುವನು. ವ್ಯಕ್ತಿಯು ತನ್ನ ಸ್ವಂತ ಆತ್ಮವನ್ನು ಈ ಪರಮಾತ್ಮನಲ್ಲಿ ಲೀನಮಾಡಿ, ಅದರ ಸ್ಥಾನದಲ್ಲಿ ಈ ಸಮಾಜಪುರುಷನನ್ನೇ ತನ್ನ ಆತ್ಮವನ್ನಾಗಿ ಮಾಡಿಕೊಳ್ಳಬೇಕು. ಆಗ ನೀವು ಬಯಸತಕ್ಕ ಅಮರತ್ವವು ಸಿದ್ಧಿಸುವುದು. ಸಮಾಜಪುರುಷನು ನಾರಾಯಣನ ಅವತಾರವೇ ಆಗಿರುವನು. ಆತನ ಕೈಂಕರ್ಯಕ್ಕಾಗಿ ವ್ಯಕ್ತಿಯು ತನ್ನ ದೇಹಾತ್ಮಗಳನ್ನು ಸಮರ್ಪಣ ಮಾಡುವುದರಿಂದ ಸರ್ವ ಪರಿಪೂರ್ಣವಾದ ಅಮರತ್ವವನ್ನು ತಪ್ಪದೆ ಹೊಂದುವನು.

**ತಾರಕ:**— ಈ ಪರಮರಹಸ್ಯವನ್ನು ನೀನು ನಮಗೆ ಅನುಗ್ರಹಿಸಿದ್ದರಿಂದ ನಾವು ಕೃತಾರ್ಥರಾದೆವು.

**ಬ್ರಹ್ಮ:**— ನಾನು ಈಗ ಅನುಗ್ರಹಿಸುವ ವರವು ಇದೇ ಎಂದು ತಿಳಿಯಿರಿ. ವ್ಯಕ್ತಿಯು ಪರಿಪೂರ್ಣನೂ ಅಮರನೂ ಆಗಬೇಕಾದರೆ, ಅವನ ಆತ್ಮಪ್ರಾಯವಾದ ಸಮಾಜವು ಪರಿಪೂರ್ಣವೂ ಅತ್ಯುತ್ತಮವೂ ಆಗಿರಬೇಕು. ವ್ಯಕ್ತಿಯು ತನ್ನ ಮಂಗಳಕ್ಕಾಗಿ ತನ್ನ ಸಮಾಜವನ್ನು ಪ್ರಶಸ್ತವಾಗಿ ಅಭಿವೃದ್ಧಿಪಡಿಸಬೇಕು. ಆದ್ದರಿಂದ ಬಾಲಕರೇ, ನೀವು

ವೈಯುಕ್ತಿಕವಾಗಿ ಹಿಂದಣವರಂತೆ ದಿವ್ಯಶಕ್ತಿಗಳನ್ನು ಪಡೆದು ಮೆರೆಯುವುದನ್ನು ಬಿಟ್ಟು, ನಿಮ್ಮ ಸಮಾಜವನ್ನು ಅತಿ ದೃಢವಾಗಿ ವ್ಯವಸ್ಥಾಪನೆ ಮಾಡಿಕೊಳ್ಳಿರಿ. ಈಗ ಹಿಂದಣಂತೆ ದಿವ್ಯಶಕ್ತಿಗಳು ಸಿದ್ಧಿಸಲಾರವು. ನೀವು ಮೂವರೂ ಚಿರಂಜೀವಿಗಳಾಗಿ ದಿವ್ಯಶಕ್ತಿಸಂಪನ್ನರಾಗಿಬಿಟ್ಟರೂ, ನಿಮ್ಮ ಅಸುರಕುಲವನ್ನೆಲ್ಲಾ ನಿಮ್ಮ ಶತ್ರುಗಳು ನಾಶಮಾಡಿಬಿಟ್ಟರೆ ಏನು ಮಾಡುತ್ತೀರಿ? ನೀವು ನಿಮ್ಮ ಸಮಾಜವನ್ನು ಸರ್ವೋತ್ಕೃಷ್ಟಸ್ಥಿತಿಗೆ ತಂದರೆ, ನೀವು ಅವಧ್ಯರೂ ಅಜೇಯರೂ ಚಿರಂಜೀವಿಗಳೂ ಸುಖಿಗಳೂ ಆಗುತ್ತೀರಿ.

**ತಾರಕ:**— ಪರಮೇಷ್ಠಿ, ನಿನ್ನ ಅಪ್ಪಣೆಯಂತೆ ನಡೆಸುತ್ತೇವೆ. ಹಿಂದೆ ನಮ್ಮವರು ವೈಯುಕ್ತಿಕವಾಗಿ ದಿವ್ಯಶಕ್ತಿಗಳನ್ನು ಪಡೆಯಲು ಪ್ರಯತ್ನಿಸುತ್ತಿದ್ದಂತೆ, ನಾವು ಈಗ ಸಾಮುದಾಯಿಕವಾಗಿ ದಿವ್ಯಶಕ್ತಿಗಳನ್ನು ಪಡೆದು, ನಮ್ಮ ಸಮಾಜವನ್ನು ದಿವ್ಯವಾಗಿ ಮಾಡಿಕೊಂಡು, ಲೋಕಾಧಿಪತ್ಯವನ್ನು ಸಂಪಾದಿಸುತ್ತೇವೆ. ಪಿತಾಮಹನೇ, ನಾವು ಹೀಗೆ ಸಿದ್ಧಿ ಪಡೆಯಲು ಶಕ್ತಿಯನ್ನು ಕರುಣಿಸು.

**ಬ್ರಹ್ಮ:**— ನೀವು ಸಾಮುದಾಯಿಕವಾಗಿ ದಿವ್ಯಸ್ಥಿತಿಯನ್ನು ಪಡೆಯಬೇಕಾದರೆ, ನಿಮ್ಮ ಸಮಾಜದ ವ್ಯವಸ್ಥೆಯು ಅಖಂಡವಾದ ಬ್ರಹ್ಮಬಲ, ಕ್ಷಾತ್ರಬಲ, ವೈಶ್ಯಬಲಗಳ ಆಧಾರದಿಂದ ಕಟ್ಟಲ್ಪಡಬೇಕು.

**ಕಮಲ:**— ಹಿರಣ್ಯಗರ್ಭ, ನೀನೇ ನಮಗೆ ಈ ಬಲಗಳನ್ನೆಲ್ಲಾ ಅನುಗ್ರಹಿಸು.

**ಬ್ರಹ್ಮ:**— ಇವುಗಳನ್ನು ನೀವೇ ಸ್ವಪ್ರಯತ್ನದಿಂದ ಸಂಪಾದಿಸಿದರೆ, ನಿಮ್ಮ ಸಮಾಜವ್ಯವಸ್ಥೆಯು ಅಮರವಾಗಿ ನಿಲ್ಲಬಲ್ಲದು. ಇವುಗಳನ್ನು ನೀವು ಪರರಲ್ಲಿ ಭಿಕ್ಷೆಯನ್ನು ಬೇಡಿ ನಿಮ್ಮ ಸಮಾಜಕ್ಕೆ ಅಂಟಿಸಿಕೊಂಡರೆ, ಕೃಷಿಯಿಲ್ಲದ ನೆಲದಲ್ಲಿ ನೆಟ್ಟಗಿಡದಂತೆ ಸ್ವಲ್ಪದರಲ್ಲಿಯೇ ಬಣಗಿಹೋಗಿ ಖಿಲವಾಗುವುವು.

**ವಿದ್ಯು:**— ಅವು ಖಿಲವಾಗದಂತೆ ನೋಡಿಕೊಳ್ಳುವ ಭಾರವು ನಮ್ಮದು. ಈಗ–ನಾವಾಗಿ ನಿನ್ನ ಸಹಾಯವಿಲ್ಲದೆ–ಅದ್ಭುತ ಸಮಾಜ

ಯಂತ್ರವನ್ನು ರಚಿಸುವುದಕ್ಕೆ ಆಗಲಾರದು. ಅದನ್ನು ನೀನೇ ನಮಗೆ ನಿರ್ಮಿಸು.

**ಬ್ರಹ್ಮ:—** ಒಳ್ಳೆಯದು, ಕರುಣಿಸಿರುವೆನು. ನಿಮ್ಮ ವ್ಯವಸ್ಥಾಪಕಶಕ್ತಿಯು ನಿಮ್ಮ ಶುಕ್ರಾಚಾರ್ಯರ ಸಹಾಯದಿಂದ ಅತ್ಯತಿಶಯವಾಗಿ ಅಭಿವೃದ್ಧಿಯಾಗಲಿ! ಶತ್ರುಗಳಿಗೆ ದುರ್ಜಯವಾದ ಮಂತ್ರರಚನೆಯಿಂದ ಕೂಡಿದ ಸ್ವರ್ಣ, ರಜತ, ಲೋಹನಿರ್ಮಿತಗಳಾದ ಮೂರು ನಗರಿಗಳನ್ನು ಮಯನು ಸೃಷ್ಟಿಸಲಿ. ಸ್ವರ್ಣನಗರಿಯಲ್ಲಿ ಬ್ರಹ್ಮಬಲವು ತುಂಬಿತುಳುಕಲಿ; ರಜತನಗರಿಯಲ್ಲಿ ಕ್ಷಾತ್ರಬಲವು ಮೆರೆಯಲಿ; ಲೋಹನಗರದಲ್ಲಿ ವೈಶ್ಯಬಲವು ತುಂಬಿರಲಿ. ನಿಮ್ಮ ರಾಜ್ಯವ್ಯವಸ್ಥೆಯು ದಕ್ಷವಾಗಿಯೂ ಸರಳವಾಗಿಯೂ ನಿರ್ದುಷ್ಟವಾಗಿಯೂ ಇರುವ ವರೆಗೂ ನೀವು ಅಜೇಯರಾಗಿರುವಿರಿ. ಆದರೆ ನಿಮ್ಮ ವ್ಯವಸ್ಥೆಯು ಸ್ವಪ್ರಯತ್ನದಿಂದ ಪರಂಪರೆಯಾಗಿ ಹುಟ್ಟಿ ಬೆಳೆದು ಬರದೆ, ಪರದತ್ತವಾಗಿ ಬಂದಿರುವುದರಿಂದ ಕಾಲಾನುಕಾಲದಲ್ಲಿ ನಿಮ್ಮ ಸಮಾಜವ್ಯವಸ್ಥೆಯಲ್ಲಿ ದೋಷ ಹುಟ್ಟಿ, ಸಾಂಕರ್ಯವೂ ಗಲಭೆಯೂ ತಲೆದೋರಿ, ಈ ಮೂರು ನಗರಿಗಳೂ ಒಂದಾಗಿ ಸೇರುವುವು. ಆಗ ನಿಮಗಿಂತಲೂ ಮಿಗಿಲಾದ ಸನ್ನಾಹದಿಂದ ಕೂಡಿದ ಮಹಾಪುರುಷರು ನಿಮ್ಮ ರಾಜ್ಯವನ್ನು ಮುತ್ತಿ, ಅತ್ಯುಗ್ರವಾದ ಒಂದೇ ಬಾಣವನ್ನು ನಿಮ್ಮ ಮೇಲೆ ಪ್ರಯೋಗಿಸಿದರೆ, ಆಗ ನಿಮ್ಮ ನಗರಗಳೂ ನಿಮ್ಮ ಆಧಿಪತ್ಯವೂ ನಾಶವಾಗುವುವು. ಅಂದಿನವರೆಗೂ ನಿಮ್ಮ ವೈಭವಕ್ಕೆ ಚ್ಯುತಿಯಿಲ್ಲ.

**ತಾರಕ:—** ಪಿತಾಮಹ, ನಿನ್ನ ಅಭಿಮಾನಕ್ಕೆ ಪಾತ್ರರಾಗಿರುವ ನಮಗೆ, ನೀನೇ ನಾಶವನ್ನೇಕೆ ಸಂಕಲ್ಪ ಮಾಡಿ ಕಟ್ಟುಮಾಡುತ್ತೀ?

**ಬ್ರಹ್ಮ:—** ನಿಮ್ಮ ಉದ್ದೇಶವು ಅಸಾಧುವಾದುದರಿಂದ ನಾನು ನಿಮ್ಮ ನಾಶವನ್ನು ಕುರಿತು ಯೋಚಿಸಬೇಕಾಯಿತು. ನೀವು ನಿಮ್ಮ ಶತ್ರುನಾಶಕ್ಕೋಸ್ಕರ ಈ ವರಗಳನ್ನೂ ಸಿದ್ಧಿಗಳನ್ನೂ ಪಡೆಯಲು ಪ್ರಯತ್ನಿಸುವುದಕ್ಕೆ ಪ್ರತಿಯಾಗಿ, ಲೋಕಮಂಗಳಕ್ಕಾಗಿ ಬಯಸಿದ್ದರೆ ನಿಮ್ಮ ನಾಶದ ಚಿಂತೆಯೇ ನನ್ನಲ್ಲಿ ಹುಟ್ಟುತ್ತಿರಲಿಲ್ಲ.

**ಕಮಲ:—** ನಮ್ಮಲ್ಲಿ ಸ್ವಾರ್ಥವು ಇನ್ನೂ ಬಿಟ್ಟುಹೋಗಿಲ್ಲ; ನಮ್ಮ ಶತ್ರುಗಳನ್ನು ನಾವೆಂದಿಗೂ ಮನ್ನಿಸಲಾರೆವು.

**ಬ್ರಹ್ಮ:—** ಹಾಗಾದರೆ ನೀವು ಅದರ ಫಲವನ್ನು ಅನುಭವಿಸಿಯೇ ತೀರಬೇಕು. (ಬ್ರಹ್ಮನು ಅಂತರ್ಧಾನನಾಗುವನು)

**ವಿದ್ಯು:—**ಬ್ರಹ್ಮನು ಸೂಚಿಸುವ ನಾಶವು ಅಪರಿಹಾರ್ಯವಾದುದಲ್ಲ. ಅದು ಬರಲು ಇನ್ನೂ ಬಹುಕಾಲವಿದೆ. ಸಹೋದರರೇ, ನಮ್ಮ ಗುರುಗಳ ಸಹಾಯದಿಂದ ನಮ್ಮ ವರಗಳ ಫಲವನ್ನು ಪಡೆಯಲು ಹೋಗೋಣ, ನಡೆಯಿರಿ. (ಹೋಗುವರು).

---

## ತೃತೀಯ ಚಿತ್ರ

**ಸ್ಥಳ**— ವನಪ್ರದೇಶ. ಎರಡು ಕಡೆಗಳಿಂದ ಕರಾಳ ಭೀಷಣರು ಪ್ರವೇಶಿಸಿ ವರು.

**ಕರಾಳ:**— ಭೀಷಣ! ನೀನು ಎಲ್ಲಿಂದ ಬಂದೆ?

**ಭೀಷಣ:**— ಗೊತ್ತಿಲ್ಲವೇ? ಭೂಲೋಕದವರನ್ನೆಲ್ಲಾ ನಿರಸ್ತ್ರರನ್ನಾಗಿ ಮಾಡಿ ಬರಲು ಗುರುಗಳಿಂದ ನಿಯುಕ್ತನಾಗಿದ್ದೆನು ಕೆಲಸವನ್ನು ಬಹು ಸಮರ್ಪಕವಾಗಿ ನೆರವೇರಿಸಿದ್ದೇನೆ. ಅಲ್ಲಿಯ ಜನರು ಒಂದು ಬಿದಿರುಕೋಲನ್ನು ಸಹ ನಮ್ಮ ಅಧಿಕಾರಿಗಳ ಅಪ್ಪಣೆ ಇಲ್ಲದೆ ಇಟ್ಟು ಕೊಳ್ಳಲಾರರು. ಸೂಜಿ, ಕತ್ತರಿ, ಚೂರಿ, ಈಳಿಗೆಮಣೆ ಇತ್ಯಾದಿಗಳನ್ನು ಸಹ ಆಧಿಪತ್ಯದ ಪೂರ್ವಭಾವಿಯಾದ ಅನುಮತಿಯನ್ನು ಪಡೆಯದೆ, ಅವರು ಮುಟ್ಟಕೂಡದೆಂದು ಏರ್ಪಡಿಸಿರುತ್ತೇನೆ.

**ಕರಾಳ:**— ಬಹಳ ಒಳ್ಳೆಯ ಕೆಲಸ ಮಾಡಿದೆ.

**ಭೀಷಣ:**— ನೀನು ಎಲ್ಲಿಗೆ ಹೊರಟೆ?

**ಕರಾಳ:**— ನಾನು ಲೋಕದವರನ್ನೆಲ್ಲಾ ನಿರ್ಧನರನ್ನಾಗಿಮಾಡಿ, ಯಾವ ಉದ್ಯೋಗವನ್ನೂ ನಮ್ಮ ಅನುಮತಿಯಿಲ್ಲದೆ ನಡೆಯಿಸಲು ನಿಷೇಧಿಸಿ, ಸಕಲರೂ ಸಮಸ್ತಕ್ಕೂ ನಮ್ಮನ್ನೇ ನಂಬಿ, ನಮ್ಮ ಪ್ರಸಾದಕ್ಕೆ ಹಪ್ಯಾರೈಸುತ್ತ ನಮ್ಮ ಜೀತಗಾರರಾಗಿ ಬದ್ಧರಾಗಿರುವಂತೆ ಮಾಡಲು ಹೋಗಿದ್ದೆನು. ಈಗ ಜಗತ್ತೆಲ್ಲವೂ ನಮ್ಮ ವಶದೊಡ್ಡಿಯಾಗಿದೆ. ಇದೋ, ಹಸ್ತಿಯು ಬರುತ್ತಿರುವನು.

(ಹಸ್ತಿಯ ಪ್ರವೇಶ)

**ಹಸ್ತಿ:**— ಮಿತ್ರರೇ, ಈಗ ನಾವು ಕೃತಕೃತ್ಯರಾದೆವು. ಲೋಕ

ದವರೆಲ್ಲರೂ ನಾವು ವಿಧಿಸುವ ಧರ್ಮಕರ್ಮಗಳನ್ನು ಹೊರತು ಮತ್ತಾವುದನ್ನೂ ಆಚರಿಸಕೂಡದೆಂದು ಏರ್ಪಡಿಸಲು ನಾನು ಹೋಗಿದ್ದೆನು.

**ಭೀಷಣ:**— ಸಾಧ್ಯವಲ್ಲದ ಈ ಕೆಲಸವನ್ನು ಎಷ್ಟು ದೂರ ನಿರ್ವಹಿಸಿದೆ?

**ಹಸ್ತಿ:**—ಸರ್ವೋತ್ತಮವಾಗಿ ಸಾಧಿಸಿದ್ದೇನೆ. ಈ ಜನರ ಧರ್ಮಾಚರಣೆಗೆ ಆಶ್ರಯವಾಗಿದ್ದ ಅವರ ಪ್ರಾಚೀನವಾದ ಶಾಸ್ತ್ರಗಳನ್ನೂ ವಿದ್ಯೆಗಳನ್ನೂ ವಿದ್ಯಾಲಯಗಳನ್ನೂ ಧರ್ಮಸಂಸ್ಥೆಗಳನ್ನೂ ಅಧಿಕಾರಸ್ಥಾನದಿಂದ ತಪ್ಪಿಸಿ ನಾಶಪಡಿಸಿದೆನು. ನಾವು ಕಲ್ಪಿಸಿರುವ ಧರ್ಮಶಾಸ್ತ್ರವನ್ನು ಹೊಸಜಾತಿಯ ನಮ್ಮ ನ್ಯಾಯಶಾಲೆಗಳು ಪರಿಪಾಲನೆ ಮಾಡುತ್ತಿವೆ. ಈ ಜನಗಳು ತಮ್ಮಲ್ಲಿ ಹುಟ್ಟತಕ್ಕ ವಿವಾದಗಳನ್ನೆಲ್ಲಾ ಆಯಾ ಕುಲಸ್ಥರು, ಜಾತಿಯವರು, ಗ್ರಾಮದ ಹಿರಿಯರು, ದೇವಾಲಯದವರು, ಗುರುಗಳು ಮೊದಲಾದವರ ಮೂಲಕ ಪರಿಹರಿಸಿಕೊಳ್ಳುತ್ತ ಸರ್ವಸ್ವಾತಂತ್ರರಾಗಿ ಮೆರೆಯುತ್ತಿದ್ದರು. ನಾನು ಈ ಸಂಸ್ಥೆಗಳನ್ನೆಲ್ಲಾ ಧ್ವಂಸಮಾಡಿ, ನ್ಯಾಯವಿಚಾರಣೆಯು ನಮ್ಮ ಆಧಿಪತ್ಯದ ಸರ್ವಮಾನ್ಯವೆಂದೂ ಸಮಸ್ತ ವಿವಾದವೂ ನಮ್ಮ ನ್ಯಾಯಶಾಲೆಗಳಲ್ಲಿಯೆ ಪರಿಹರಿಸಲ್ಪಡಬೇಕೆಂದೂ ಏರ್ಪಡಿಸಿದೆನು. ಜನಗಳಲ್ಲಿ ವಿವಾದವು ನಿರಂತರವಾಗಿ ಹೆಚ್ಚಿ, ಅವರ ಜುಟ್ಟು ಯಾವಾಗಲೂ ನಮ್ಮ ಕೈಯಲ್ಲಿರುವಂತೆ ಮಾಡುವುದಕ್ಕಾಗಿ, ಇಂತಹ ವಿವಾದಗಳಿಂದಲೇ ಜೀವನಮಾಡತಕ್ಕ ವಕೀಲರೆಂಬ ಹೊಸ ವೃತ್ತಿಯವರನ್ನು ಕಲ್ಪಿಸಿದೆನು. ಈ ವಕೀಲರು ತಮ್ಮ ಜನರ ವ್ಯಾವಹಾರಿಕ ಮತ್ತು ನ್ಯಾಯಪರಿಪಾಲನೆಯ ಸ್ವಾತಂತ್ರ್ಯವನ್ನು ಬಹು ಚೆನ್ನಾಗಿ ನಾಶಮಾಡುತ್ತಿರುವರು. ಈ ಜನರಲ್ಲಿ ಬಳಕೆಯಲ್ಲಿದ್ದ ಸಂಸ್ಕೃತ, ಪ್ರಾಕೃತಭಾಷೆಗಳನ್ನು ಮೂಲೆಗೆ ತಳ್ಳಿ, ಸರಕಾರದ ಕೆಲಸ, ನ್ಯಾಯವ್ಯವಹಾರ, ವಿದ್ಯಾಭ್ಯಾಸ ಮೊದಲಾದುವೆಲ್ಲವೂ ಪಿಶಾಚಭಾಷೆಯಲ್ಲಿ ನಡೆಯುವಂತೆ ಗೊತ್ತುಮಾಡಿದೆನು. ಸರಕಾರದ ದೊಡ್ಡ ಅಧಿಕಾರಗಳೆಲ್ಲವೂ ನಮ್ಮವರಿಂದಲೇ ನಿರ್ವಹಿಸಲ್ಪಡುತ್ತಿರುವುವು. ಹಳೆಯ ವಿದ್ಯಾಶಾಲೆಗಳನ್ನೂ ಹಳೆಯ ಗುರುವರ್ಗಗಳನ್ನೂ ನಾಶಪಡಿಸಿ, ಹೊಸ ಪಾಠಶಾಲೆಗಳನ್ನು ಸ್ಥಾಪಿಸಿ ಅಲ್ಲಿ ನಮ್ಮವರ ದ್ವಾರಾ ಹೊಸ ವಿದ್ಯೆಗಳನ್ನು ಕಲಿಸಲು ಏರ್ಪಡಿಸಿದೆನು.

ಈ ಮಾರ್ಗದಿಂದ ನಮಗೆ ಬೇಕಾದ ಜೀತಗಾರರನ್ನು ತಯಾರಿಸಿಕೊಳ್ಳು ತ್ತಿದ್ದೇವೆ. ಈ ಹೊಸ ವಿದ್ಯಾಭ್ಯಾಸವು ಈ ಜನರಲ್ಲಿ ಸ್ವಾಭಿಮಾನ, ಸ್ವಧರ್ಮಪ್ರೀತಿ, ಸ್ವಾತಂತ್ರ್ಯಪ್ರವೃತ್ತಿಗಳನ್ನು ನಿರ್ಮೂಲಿಸಿ, ನಮ್ಮ ನಮ್ಮ ಆಧಿಪತ್ಯವನ್ನು ಚಿರಸ್ಥಾಯಿಯಾಗಿ ಮಾಡುತ್ತಿರುವುದು. ಈ ಲೋಕದವರು ನಮ್ಮ ಹೆದರಿಕೆಯಿಂದ ಮಾತ್ರವೇ ಅಲ್ಲದೆ ಬುದ್ಧಿಪೂರ್ವಕ ವಾಗಿ, ದೇವತೆಗಳನ್ನೂ ತಮ್ಮ ಧರ್ಮಶಾಸ್ತ್ರವನ್ನೂ ನಿರಾಕರಿಸುತ್ತ ಬಂದು, ಆಸುರೀಧರ್ಮವೇ ಸರ್ವಶ್ರೇಷ್ಠವೆಂದು ನಂಬುತ್ತಿರುವರು. ನಮ್ಮ ಶತ್ರುಗಳಾದ ದೇವತೆಗಳ ಪ್ರಾಬಲ್ಯವೂ ಅಧಿಕಾರವೂ ಭೂಲೋಕ ದಲ್ಲಿ ಕೊನೆಗಂಡಿವೆ.

**ಕರಾಳ**:—ಅಧೋಲೋಕವು ಮೊದಲಿನಿಂದಲೂ ನಮ್ಮ ವಶವರ್ತಿ ಯಾಗಿಯೇ ಇದ್ದಿತು. ಈಗ ಭೂಲೋಕದವರನ್ನು ನಮ್ಮ ಜೀತಪಶು ಗಳನ್ನಾಗಿ ಮಾಡಿಕೊಂಡಿದ್ದೇವೆ. ಸ್ವರ್ಗಲೋಕವನ್ನೂ ಹೀಗೆಯೇ ಅಡಗಿ ಸಿದರೆ ನಮ್ಮ ಪದವಿಗೆ ಎಂದೆಂದಿಗೂ ಅಪಾಯವಿರದು.

**ಭೀಷಣ**:— ನಿಜ. ಆದರೆ ಅದು ಹೇಗೆ ತಾನೆ ಸಾಧ್ಯವು? ಏನೇ ಆಗಲಿ, ದೇವತೆಗಳನ್ನು ಪಶುಗಳಾಗಿ ಮಾಡಲಾಗುವುದಿಲ್ಲ. ಅವರನ್ನು ಪಶುಗಳಂತೆ ಮಾಡಿ ಆಳಲು, ತ್ರಿಮೂರ್ತಿಗಳು ಸಹ ಪ್ರಯತ್ನಿಸಿಲ್ಲವೆಂದ ಮೇಲೆ ನಾವು ಅದಕ್ಕೆ ಕೈಹಾಕುವುದು ಯೋಗ್ಯವೇ?

**ಹಸ್ತಿ**:— ಅದೇಕೆ ಹಾಗೆ ಹೇಳುತ್ತೀ? ಈಗ ದೇವತೆಗಳು ಇರುವ ಸ್ಥಿತಿಯನ್ನು ನೋಡು. ನಾವು ಅವರ ಸಾಮ್ರಾಜ್ಯವನ್ನು ಕಿತ್ತುಕೊಂ ಡೆವು. ಅವರ ತಪಶ್ಚರ್ಯವನ್ನು ದೋಚಿದೆವು. ಅವರ ಶಕ್ತಿಯನ್ನು ಉಡುಗಿಸಿದೆವು. ಅವರ ಅನರ್ಘ್ಯವಸ್ತುಗಳನ್ನೆಲ್ಲಾ ಅಪಹರಿಸಿದೆವು. ಅವರನ್ನು ವಿವಿಧಪರಿಯಲ್ಲಿ ಅಪಮಾನಗೊಳಿಸಿದೆವು. ಅವರ ಅನ್ನಕ್ಕೆ ಆಶ್ರಯವಾಗಿದ್ದ ಯಜ್ಞಾದಿಸಂಸ್ಥೆಗಳನ್ನೆಲ್ಲಾ ಧ್ವಂಸಮಾಡಿದೆವು. ನಮ್ಮ ಭಯದಿಂದ ಅವರು ಕಾಡುಪಾಲಾಗಿರುವರು. ದೇವತೆಗಳು ಏಕ ಕಾಲದಲ್ಲಿ ಸಮಸ್ತವನ್ನು ಕಳೆದುಕೊಂಡು ಮಂಕರಾಗಿ, ಹೊಟ್ಟೆಗಿಲ್ಲದೆ ಕಷ್ಟಪಡುತ್ತ ನಮ್ಮ ಸಾಮಂತರಾಗಿರುವರು. ಈ ಸ್ಥಿತಿಯು ಪಶುವಿ ಗಿಂತಲೂ ಮೇಲಾದದ್ದೆಂದು ಹೇಗೆ ಹೇಳುತ್ತೀ?

**ಕರಾಳ:**— ಇಷ್ಟಾದರೂ ಇವರಿಗೆ ಪಶುದಾಸ್ಯಸ್ಥಿತಿ ಪ್ರಾಪ್ತವಾಗಿಲ್ಲ. 'ಪಶುದಾಸ್ಯ' ಎಂದರೆ ವಿದ್ಯಾಬುದ್ಧಿವಿಹೀನರಾಗಿ, ಸ್ವಾತಂತ್ರ್ಯಚೇಷ್ಟಾಶೂನ್ಯರಾಗಿ, ತಮ್ಮ ಪ್ರಭುಗಳನ್ನು ಸೇವಿಸುವುದರಲ್ಲಿಯೇ ಸಂತೋಷವುಳ್ಳವರಾಗಿ, ತಮ್ಮ ದಾಸ್ಯವೇ ಪರಮಾರ್ಥಪ್ರದವೆಂದು ತಿಳಿದು ಅದರಲ್ಲಿ ಹೆಮ್ಮೆ ಪಡುತ್ತ, ಸ್ವಾತ್ಮಗೌರವಚಿಂತೆಯೇ ಇಲ್ಲದಿರುವ ಸ್ಥಿತಿಯು. ಭೂಲೋಕದವರು ಈಗ ಇಂತಹ ಪಶುದಾಸ್ಯವನ್ನು ಪಡೆದು ನಮ್ಮ ಅಧೀನರಾಗಿರುವರು. ದೇವತೆಗಳು ನಮ್ಮ ಸಾಮಂತರಾದರೂ ಹೀಗೆ ಪಶುದಾಸ್ಯವನ್ನು ಪಡೆದಿಲ್ಲ. ಇವರು ಸ್ವಾತಂತ್ರ್ಯವನ್ನು ಸಾಧಿಸಲು ರಹಸ್ಯ ಪ್ರಯತ್ನಗಳನ್ನು ನಡೆಯಿಸುತ್ತಲೇ ಇರುವರು.

**ಭೀಷಣ:**— ದೇವತೆಗಳನ್ನು ನಿಶ್ಶೇಷವಾಗಿ ನಾಶಮಾಡುವ ವರೆಗೂ ನಮಗೆ ನೆಮ್ಮದಿ ಇರದು.

**ಹಸ್ತಿ:**— ತ್ರಿಮೂರ್ತಿಗಳು ಇರುವ ವರೆಗೂ ಇವರು ನಾಶವಾಗಲಾರರು.

**ಕರಾಳ:**— ಇದುವರೆಗೂ ತ್ರಿಮೂರ್ತಿಗಳು ತಟಸ್ಥರಾಗಿರುವರು.

**ಹಸ್ತಿ:**— ಮುಂದೆಯೂ ಅವರು ಹಾಗೆಯೆ ಇರಲಾರರು.

**ಕರಾಳ:**— ಅವರು ಕುಣಿದಾಡಿ ನಮಗೆ ಮಾಡುವುದಾದರೂ ಏನು? ಹರಿಹರಾದಿಗಳು ಕೋಟಿವರ್ಷ ಕೈಮಾಡಿದರೂ ನಮ್ಮ ಸಮಾಜವ್ಯೂಹವೂ ನಾಗರಿಕತೆಯೂ ಯಂತ್ರವ್ಯವಸ್ಥೆಯೂ ಅಲ್ಲಾಡುವುದಿಲ್ಲ. ಹಣ್ಣುಹಣ್ಣು ಮುದುಕನಾದ ಆ ಮಯನು ನಮ್ಮ ತ್ರಿಪುರಗಳನ್ನು ಇಷ್ಟೊಂದು ಅದ್ಭುತವಾಗಿ ರಚಿಸಬಲ್ಲನೆಂದು ಯಾರು ಕಂಡಿದ್ದರು? ಇಷ್ಟು ಆಶ್ಚರ್ಯಕರವಾದ ವ್ಯವಸ್ಥಾಕೌಶಲ್ಯವೂ ಯಂತ್ರಚಮತ್ಕಾರವೂ ಲೋಕದಲ್ಲಿ ಮತ್ತಾವಾಗಲೂ ಗೋಚರಿಸಿಲ್ಲ.

**ಭೀಷಣ:**— ಈ ಕಲಾಕೌಶಲ್ಯವು ಒಂದು ನಗರದಲ್ಲಿರುವುದಕ್ಕಿಂತಲೂ ಮತ್ತೊಂದರಲ್ಲಿ ಅಧಿಕವಾಗಿದೆ. ರಜತನಗರದಲ್ಲಿರುವ ಯುದ್ಧಸಂಭಾರ, ಸೇನಾಸಂವಿಧಾನ, ಶಸ್ತ್ರಸಂಗ್ರಹ, ದುರ್ಗನಿರ್ಮಾಣ, ವೀರಪ್ರತಾಪ, ಕ್ಷಾತ್ರಮದ ಇವು ಮತ್ತೆಲ್ಲಿಯೂ ಕಂಡುಬರುವುದಿಲ್ಲ. ಇಲ್ಲಿ

ಆಬಾಲವೃದ್ಧ-ಸ್ತ್ರೀ-ಪಶ್ವಾದಿಗಳೂ ವೀರರಸದಿಂದ ಮತ್ತವಾಗಿ ಮೆರೆಯು ತ್ತಿವೆ. ವಿದ್ಯುನ್ಮಾಲಿಯ ಲೋಹನಗರಿಯಲ್ಲಿ, ಸಕಲಕಾರ್ಯಗಳನ್ನೂ ದಿವ್ಯವಜ್ರಶಕ್ತಿಸಂಚಾಲಿತವಾದ ಯಂತ್ರಗಳು ಮಾಡುತ್ತಿರುವುವು. ಅಲ್ಲಿಯ ಗಗನಾಕಾರದ ಕೈಗಾರಿಕೆಯ ಸದನಗಳನ್ನೂ ವ್ಯಾಪಾರಾಲಯ ಗಳನ್ನೂ ರಾಶಿರಾಶಿಯಾಗಿ ಕಂಗೊಳಿಸುವ ಸಂಪತ್ತನ್ನೂ ನೋಡಿದರೆ ಎದೆ ಯೊಡೆದು ಹೋಗುವುದು. ಅಲ್ಲಿರತಕ್ಕ ಅಸುರರೆಲ್ಲರೂ ಕೋಟೀಶ್ವರರೇ ಆಗಿರುವರು.

**ಹಸ್ತಿ**:— ಸುವರ್ಣನಗರಿಯು ಪ್ರತ್ಯಕ್ಷ ವಿದ್ಯಾನಗರಿಯಾಗಿ ಸರಸ್ವತೀ ಪೀಠವಾಗಿದೆ. ಅಲ್ಲಿಯ ಮನೆಮನೆಯೂ ಒಂದೊಂದು ವಿದ್ಯಾ ಲಯವೆಂದರೂ ಉತ್ಪ್ರೇಕ್ಷೆಯಾಗದು. ಎಲ್ಲಿ ನೋಡಿದರೂ ವಿದ್ವಾಂ ಸರೂ ತಾತ್ತ್ವಿಕರೂ ಮತಪಿಡ್ಡರೂ ಜಿಜ್ಞಾಸುಗಳೂ ತುಂಬಿಹೋಗಿರು ವರು. ಈ ನಗರದವರೆಲ್ಲರೂ ಬ್ರಹ್ಮವಾದಿಗಳಾಗಿ ಔಪನಿಷದಿಕರಾಗಿರು ವರು. ಅಶೇಷಸ್ತ್ರೀಯರೂ ಬ್ರಹ್ಮವಾದಿನಿಯರಾಗಿ, ವಿದ್ಯಾವತಿಯರಾ ಗಿರುವರು. ತಾರಕಾಕ್ಷನು ಜನಕಮಹಾರಾಜನಂತೆ ಬ್ರಹ್ಮವಿದನಾಗಿ, ವಿರಕ್ತನಾಗಿ, ಆತ್ಮೋಪಾಸಕನಾಗಿ, ಬ್ರಹ್ಮತೇಜದಿಂದ ಪ್ರಕಾಶಿಸುತ್ತಿರು ವನು. ಇವನ ಆಸ್ಥಾನವು ಉಪನಿಷನ್ಮಯವಾಗಿರುವುದು.

**ಕರಾಳ**:— ಹೀಗಿದ್ದರೂ ನಮ್ಮ ರಾಜ್ಯದಲ್ಲಿ ಲವಲೇಶವಾದರೂ ಗೊಡ್ಡುತನ ಮಾತ್ರ ಇಲ್ಲ. ನಮ್ಮ ಗುರುಗಳು ಧರ್ಮವನ್ನೂ ಕಾಮ ವನ್ನೂ ಅರ್ಥಕ್ಕೆ ಕೀಳ್ಪಡಿಸಿ, ಅತ್ಯುತ್ತಮವಾದ ನಾಗರಿಕತೆಯನ್ನು ಕಲ್ಪಿ ಸಿರುವರು. ವೇದದ ಕರ್ಮಕಾಂಡವು ಅಸುರನಗರಿಯಲ್ಲಿ ಭಂಗಪಟ್ಟು ಭೂಲೋಕಕ್ಕೆ ಓಡಿಹೋಗಿ, ತಲೆ ಮರಸಿಕೊಂಡು ವಿಕಾರರೂಪವನ್ನು ಪಡೆಯುತ್ತಿರುವುದು.

**ಭೀಷಣ**:— ನಮ್ಮ ರಾಜರೂ ಗುರುಗಳೂ ಎಷ್ಟೇ ಸಣ್ಣ ವಿಚಾರ ವನ್ನಾದರೂ ಉದಾಸೀನ ಮಾಡದೆ, ಕಣ್ಣೇ ಕಾವಲಾಗಿ ನೋಡಿಕೊಳ್ಳುತ್ತ ಬಹು ದಕ್ಷತೆಯಿಂದ ಆಳುತ್ತಿರುವರು. ನಮ್ಮ ಈಗಿನ ಏರ್ಪಾಡುಗಳಿಂದ ದೇವತೆಗಳು ಭಂಗಪಟ್ಟಿರುವಷ್ಟು ದೂರ ಮತ್ತಾವಾಗಲೂ ಪಟ್ಟಿಲ್ಲ.

**ಹಸ್ತಿ:**— ಆದರೂ ಈ ಏರ್ಪಾಡುಗಳಿಂದ ನಾವು ಹರಿಯನ್ನು ಜಯಿಸಲಾಗುವುದೇ? ತಂತ್ರಿಯಾದ ಈ ಹರಿಯು, ನಮ್ಮ ವ್ಯವಸ್ಥೆಯಲ್ಲಿ ದೋಷಹುಟ್ಟುವುದನ್ನೇ ನಿರೀಕ್ಷಣೆ ಮಾಡುತ್ತ ಇರುವನು. ಅವನು ವ್ಯಕ್ತವಾಗಿ ಎದುರಿಸುವಾಗ, ನಾವು ಮೂರು ದುರ್ಗಗಳಲ್ಲಿ ಚೆದರಿರುವುದಕ್ಕಿಂತಲೂ ಏಕಸಮುದಾಯವಾಗಿದ್ದರೆ ಒಳ್ಳೆಯದೆಂದು ಕೆಲವುವೇಳೆ ನನಗೆ ಯೋಚನೆ ಹುಟ್ಟುತ್ತಿದೆ.

**ಕರಾಳ:**— ಈಗಲೂ ಏನೂ ಬಾಧಕವಿಲ್ಲ. ಹರಿಯು ಇನ್ನು ನಮ್ಮ ತಂಟೆಗೆ ಬಹಿರಂಗವಾಗಿ ಬರಲಾರನು.

**ಭೀಷಣ:**— ಹೊತ್ತಾಯಿತು. ನಾವು ಮಾಡಿದ್ದನ್ನೆಲ್ಲಾ ಗುರುಗಳಿಗೆ ಹೋಗಿ ನಿವೇದಿಸಬೇಕು. (ಹೋಗುವರು).

---

# ಚತುರ್ಥ ಚಿತ್ರ

**ಸ್ಥಳ**— ಸ್ವರ್ಗದ ನಂದನವನದಲ್ಲಿ ಒಂದು ಲತಾಮಂಟಪ. ದೇವೇಂದ್ರನು ಬೃಹಸ್ಪತಿ, ಮೇಧಾತಿಥಿ, ಕಾಣ್ವ, ಸನತ್ಕುಮಾರ, ಅಥರ್ವಣ, ವಾತ್ಸ್ಯಾಯನ, ಅಗಸ್ತ್ಯ, ನಾರದರೊಡನೆ ಮಂತ್ರಾಲೋಚನೆ ಮಾಡುತ್ತಿರುವನು.

**ಇಂದ್ರ**:— ಪೂಜ್ಯರೇ, ನಮ್ಮ ದುರವಸ್ಥೆಯನ್ನೆಲ್ಲಾ ನೋಡಿದಿರಷ್ಟೆ? ಇದಕ್ಕೆ ಏನಾದರೂ ನಿವಾರಣೋಪಾಯವನ್ನು ತಿಳಿಸಿರಿ. ನನಗೆ ಏನೂ ತೋಚುವುದಿಲ್ಲ.

**ಗುರು**:— ದೇವೇಂದ್ರ, ನಿಮ್ಮ ಸಾಮ್ರಾಜ್ಯದ ವ್ಯವಸ್ಥೆಯು ಅನರ್ಥಕವಾದುದೆಂದು ನಾನು ಮೊದಲಿನಿಂದಲೂ ಹೇಳುತ್ತಲೇ ಇದ್ದೇನು. ನಾನು ನಾಸ್ತಿಕನೆಂದು ಯಾರೂ ನನ್ನ ಮಾತಿಗೆ ಲಕ್ಷ್ಯವಿಡಲಿಲ್ಲ. ನನ್ನ ಪರಾಮರ್ಶದಂತೆ ನಡೆದಿದ್ದರೆ, ದೇವಕುಲವು ಎಂದಿಗೂ ಸ್ವಾವಲಂಬನ ಶಕ್ತಿಯನ್ನು ಕಳೆದುಕೊಳ್ಳುತ್ತಿರಲಿಲ್ಲ. ನಿನ್ನ ರಾಜನೀತಿಯಲ್ಲಿ ಆಸ್ತಿಕ್ಯವು ತಲೆಯೆತ್ತಿಕೊಂಡಾಗಿನಿಂದಲೂ ನೀವು, ತ್ರಿಮೂರ್ತಿಗಳ ಸ್ವೇಚ್ಛಾ ಪ್ರಭುತ್ವಕ್ಕೆ ವಶರಾಗಿ, ಸರ್ವದಾ ದೈವವನ್ನೇ ನಂಬಿ, ಪರಾವಲಂಬಿಗಳಾಗಿ ಜೀವಿಸಲಾರಂಭಿಸಿದಿರಿ. ನಿಮ್ಮ ಧರ್ಮಬಲವೂ ಕರ್ಮಶಕ್ತಿಯೂ ತಪಸ್ಸಾಮರ್ಥ್ಯವೂ ಕ್ರಮವಾಗಿ ಕುಗ್ಗುತ್ತಾ ಬಂದುವು. ತ್ರಿಮೂರ್ತಿಗಳನ್ನು ನಚ್ಚಿಮಾಡದೆ ಏಕಾಯತ್ತ ಪ್ರಭುತ್ವ ಮಾಡುತ್ತಿದ್ದ ಕಾಲದಲ್ಲಿ, ನೀನು ವಿಶ್ವರೂಪ, ವೃತ್ರ, ಬಲ, ನಮುಚಿ, ಪ್ರಲಂಬ, ಪಾಕ, ಪಣಿ, ಶಂಬರ ಮೊದಲಾದ ಶತ್ರುಗಳನ್ನು ಸ್ವಸಾಹಸದಿಂದ ನಾಶಮಾಡಿದೆ. ಆಸ್ತಿಕ್ಯದಿಂದ ಸ್ವಾವಲಂಬನ ಪ್ರವೃತ್ತಿಯು ಕ್ಷಯಿಸಿದಾಗ, ಹಿರಣ್ಯಾಕ್ಷಾದಿ ಅಸುರರು ತಪಸ್ಸಾದಿಗಳಲ್ಲಿ ನಿನ್ನನ್ನು ಹಿಂದೆ ಹಾಕಿ, ತ್ರೈಲೋಕ್ಯಾಧಿ

ಪತ್ಯವನ್ನು ಜಯಿಸಿ ಮೆರೆಯತೊಡಗಿದರು. ಆಗ ನೀನು ಸ್ವಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವ ಹವ್ಯಾಸಕ್ಕೆ ಹೋಗದೆ, ತ್ರಿಮೂರ್ತಿಗಳ ಸಹಾಯಭಿಕ್ಷೆಯನ್ನು ಅವಲಂಬಿಸಿ ಕುಳಿತೆ. ಅಸುರರು ವಿಶ್ವವ್ಯವಸ್ಥೆಯನ್ನು ಅಲ್ಲಾಡಿಸಲು ಪ್ರವರ್ತಿಸಿದ್ದರಿಂದ ಮಹಾವಿಷ್ಣುವು ನಿನ್ನ ಪ್ರಾರ್ಥನಾವ್ಯಾಜದಿಂದ ಅವರನ್ನು ನಿಗ್ರಹಿಸಲಾರಂಭಿಸಿದನು. ನಾಸ್ತಿಕ್ಯದಿಂದ ಸ್ವಾವಲಂಬಿಗಳಾಗಿದ್ದ ಅಸುರರ ಪ್ರಯತ್ನವು ಬರುಬರುತ್ತ ಹೆಚ್ಚುತ್ತಾ ಬಂದುದರಿಂದ, ಅಸುರದಮನವು ಹರಿಗೆ ನಿತ್ಯಕಾರ್ಯವಾಯಿತು. ನಿಮ್ಮ ಶತ್ರುಗಳನ್ನು ನಿವಾರಿಸಲು ಸ್ವಪ್ರಯತ್ನ ಪಡತಕ್ಕ ಅಭ್ಯಾಸವೇ ನಿಮಗೆ ತಪ್ಪಿತು. ಹಿಂದಕ್ಕೆ 'ದೇವತೆ' ಎಂದರೆ: ಧರ್ಮ, ಜ್ಞಾನ, ಕರ್ಮದಕ್ಷತೆ, ತಪಸ್ಸು, ಯುದ್ಧ, ಸಾಹಸ ಮೊದಲಾದ ಗುಣಗಳಲ್ಲಿ ಸರ್ವಶ್ರೇಷ್ಠರು—ಎಂಬ ಭಾವನೆ ಇದ್ದಿತು, ಈಗ 'ದೇವತೆ' ಎಂದು ತುಚ್ಛವಾದ ಕಾಮೋಪಭೋಗದಲ್ಲಿ ಮುಳುಗಿ, ಪರಜೀವಿಗಳಾಗಿ ಬಾಳತಕ್ಕವರಿಗೆ ಹೆಸರಾಗಿದೆ.

**ಇಂದ್ರ:**— ಗುರುಗಳೇ, ನಾವು ಈಗ ಇರುತ್ತಿದ್ದ ಸ್ಥಿತಿಯು ಪ್ರಾಪ್ತವಾಗಿ ಬಹುದಿವಸಗಳಾದುವು. ಅದು ಈಗ ಮಾತ್ರ ಕೆಟ್ಟುಹೋಗಿ ನಮ್ಮನ್ನು ದುರವಸ್ಥೆಗೆ ತಂದಿತೆಂದು ಹೇಳಲಾಗುವುದಿಲ್ಲ.

**ಗುರು:**— ನಿನ್ನ ಮಾತು ಬಲು ಸೋಜಿಗವಾಗಿದೆ. ಕೆಟ್ಟದಾರಿ ಹಿಡಿದವನು ಎಂದಾದರೂ ಹಳ್ಳಕ್ಕೆ ಬೀಳಲೇಬೇಕು; ಸ್ವಲ್ಪಕಾಲ ಅವನು ಹಳ್ಳಕ್ಕೆ ಬೀಳದಿದ್ದ ಮಾತ್ರಕ್ಕೆ ಆ ಕರ್ಮದ ಫಲವು ಲುಪ್ತವಾಗಿಬಿಟ್ಟಿತೆಂದು ಅರಿತು, ಮುಂದೆ ಸಂಭವಿಸತಕ್ಕ ಪತನಕ್ಕೆ ಬೇರೆ ಕಾರಣವನ್ನು ಹುಡುಕಹೋಗುವುದು ವಕ್ರಬುದ್ಧಿಯೇ ಸರಿ. ನೀವು ಹಿಡಿದಿದ್ದ ಕೆಟ್ಟ ದಾರಿಯ ದುಷ್ಫಲವು ಕ್ರಮವಾಗಿ ಶೇಖರವಾಗುತ್ತ ಬಂದು ಈಗಿನ ದುರವಸ್ಥೆಯನ್ನು ಕಲ್ಪಿಸಿದೆ.

**ಇಂದ್ರ:**— ದೇವಜೀವನವು ಅಸಾಧುವಾದುದೆಂದು ತಾವು ಹೇಳುತ್ತೀರಾ?

**ಮೇಧಾ:**— ನಿಮ್ಮ ದೇವಜೀವನವು ಬಲು ಹೇಸಿಗೆಯದಾಗಿದೆ. ನಿಮ್ಮ ಲೋಕದ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಮೊದಲಾದ

ಯಂತ್ರಸಾಧನಗಳು ಲೋಕವನ್ನೆಲ್ಲಾ ಕೊಳ್ಳೆ ಹೊಡೆದು. ನೀವು ಕೇಳಿ ದ್ದನ್ನು ಕುಳಿತಕಡೆಯೇ ಒದಗಿಸುವುದರಿಂದ, ನಿಮ್ಮಲ್ಲಿ ಯಾರೂ ಯಾವು ದಕ್ಕೂ ದೇಹಶ್ರಮ ಪಡುವ ಅಗತ್ಯ ತಪ್ಪಿಹೋಗಿದೆ. ಇದರಿಂದ ನಿಮ್ಮ ಲೋಕದಲ್ಲಿ ಯಾರೂ ರೆಪ್ಪೆ ಸಹ ಅಲುಗಾಡಿಸರು; ಯಾರ ಕಾಲೂ ಧೂಳಾಗದು; ಯಾರ ಮೈಯಲ್ಲೂ ಬೆವರೇ ಹುಟ್ಟದು. ನಿಮಗೆ ರೋಗ ರುಜೆ, ಮುಪ್ಪು, ಮರಣಗಳ ಕೋಟಲೆಯೂ ಹಸಿವು ಬಾಯಾರಿಕೆ ಗಳ ಬಾಧೆಯೂ ಇಲ್ಲ ಆದ್ದರಿಂದ ನಿಮಗೆ ಸೌಖ್ಯವು ಧನಾರ್ಜನೆ, ಆಹಾರ, ಆರೋಗ್ಯ, ಪದವಿ, ಕೀರ್ತಿ ಮೊದಲಾದ ಸಿದ್ಧಿಗಳಾವುದರಲ್ಲೂ ನೆಲಸಿರಲಾರದೆ, ಸ್ತ್ರೀಕಾಮ ಒಂದರಲ್ಲಿ ಮಾತ್ರ ಅತ್ಯಂತವಾಗಿ ಅಡಗಿದೆ. ಸ್ವರ್ಗವು ಶುದ್ಧವಾಗಿ ವೇಶ್ಯಾಲೋಕವಾಗಿ ಪರಿಣಮಿಸಿದೆ. ಭೂಲೋ ಕದ ಧರ್ಮಾಧರ್ಮವ್ಯವಸ್ಥೆಯು ನಿಮ್ಮ ವಶವಾಗಿದ್ದಿತು. ನೀವು ಅದನ್ನು ಎಳ್ಳಷ್ಟೂ ನೋಡಿಕೊಳ್ಳುತ್ತಿಲ್ಲ ಧರ್ಮವೇ ನಿಮ್ಮ ಪುರುಷಾರ್ಥ ವಾಗಿದ್ದಿತು. ಈಗ ಕಾಮವು ನಿಮ್ಮ ಪುರುಷಾರ್ಥವಾಗಿದೆ. ಆನ್ವೀ ಕ್ಷಿಕೀ, ತ್ರಯೀ ವಾರ್ತಾ, ದಂಡನೀತಿಯೆಂಬ ಚತುರ್ವರ್ಗದ ವಿದ್ಯಾ ಸಮೂಹವು ನಿಮಗೆ ವಶವಾಗಿದ್ದಿತು. ಈಗ ನೀವು ವಿದ್ಯಾಶೂನ್ಯರಾದ ಪಶುಗಳಾಗಿದ್ದೀರಿ.

**ವಾತ್ಸ್ಯಾಯನ:—** ಕಾಮಲೋಲುಪತೆಗೂ ಕಾಮವನ್ನು ಪುರುಷಾರ್ಥವಾಗಿಟ್ಟುಕೊಂಡು ಸಾಧಿಸುವುದಕ್ಕೂ ಬಹಳ ವ್ಯತ್ಯಾ ಸವಿದೆ. ದೇವತೆಗಳು ಕಾಮಜೀವಿಗಳಾಗಿ ಪರಿಣಮಿಸಿರುವರೇ ಹೊರತು ಕಾಮಪುರುಷಾರ್ಥಿಗಳಾಗಿಲ್ಲ. ಕಾಮವನ್ನು ಪುರುಷಾರ್ಥವಾಗಿ ಇಟ್ಟು ಕೊಂಡು ಸಾಧಿಸಬೇಕಾದರೆ ಬಹಳ ಯೋಗ್ಯತೆಯೂ ಸಾಹಸವೂ ಬೇಕು ಪುರುಷಾರ್ಥವು ಬುದ್ಧಿಬಲದಿಂದ ಆರಿಸಲ್ಪಡುವ ಧ್ಯೇಯವು. ಅದರ ಸಾಧನೆಗೂ ಬುದ್ಧಿಬಲ ಬೇಕು. ಕಾಮವು ಪರಿಣತಬುದ್ಧಿ ಯಿಂದ ಶೃಂಗಾರಪ್ರೇಮವಾಗಿ ಪರಿಣಮಿಸುವುದು. ಬುದ್ಧಿಯು ತಾನು ಸಂಪಾದಿಸಬಹುದಾದ ಸಮಸ್ತಪರಿಣತಿಯನ್ನೂ ಈ ಶೃಂಗಾರಪ್ರೇಮಾ ಭಿವೃದ್ಧಿಗಾಗಿ ವಿನಿಯೋಗಿಸಬಲ್ಲುದು. ಬುದ್ಧಿಯಪರಿಣತಿ ಹೆಚ್ಚಾದಷ್ಟು ಶೃಂಗಾರಪ್ರೇಮದ ಗುಣವು ಹೆಚ್ಚುವುದು. ಚತುರ್ವರ್ಗರೂಪವಾದ

ಲೋಕದ ಅನಂತವಿದ್ಯೆಗಳೂ ಈ ಪ್ರೇಮಸಾಧನೆಯಲ್ಲಿ ವಿನಿಯೋಗವಾಗುವುವು. ಮತ್ತಾವ ಪುರುಷಾರ್ಥವೂ ಈ ನಾಲ್ಕುವರ್ಗದ ವಿದ್ಯೆಗಳನ್ನೂ ಕಾಮದಂತೆ ವಶಪಡಿಸಿಕೊಳ್ಳಲಾರದು. ಕಾಮಪುರುಷಾರ್ಥಿಗೆ ವಿದ್ಯಾಬಲವೂ ಇತರ ವಿಧವಾದ ಬಲಗಳೂ ವಿಶೇಷವಾಗಿರುವುದರಿಂದ, ಅವನು ಎಂದಿಗೂ ಕ್ಷೀಣತೆಯನ್ನು ಪಡೆಯಲಾರನು. ರಮ್ಯವೂ ಶೃಂಗಾರಮಯವೂ ಪ್ರೇಮಭರಿತವೂ ಆದ ಜೀವನವು ಎಂದಿಗೂ ಕ್ಷೀಣವೆನ್ನಿಸದು. ತಿಳಿಯದವರು ಕಾಮವನ್ನು ನಿಂದಿಸುವರು. ಕಾಮವಿಲ್ಲದಿದ್ದರೆ ಜೀವಿಗಳಲ್ಲಿ ಯಾವ ಕ್ರಿಯೆಯೂ ಹುಟ್ಟುವುದಿಲ್ಲ. ಚೇತನಾಚೇತನ ದ್ರವ್ಯಗಳ ಭೇದಕ್ಕೆ ಕಾಮವೇ ಕಾರಣವಾಗಿದೆ. ಚೈತನ್ಯಶಕ್ತಿಗೆ ಕಾಮವು ಮುಖ್ಯಾಂಗವೆನ್ನಬಹುದು. ಕಾಮವಿಲ್ಲದಿದ್ದರೆ ಸ್ವಸ್ವರೂಪಸಿದ್ಧಿ ಹುಟ್ಟಲಾರದು; ಧರ್ಮಾರ್ಥ ಮೋಕ್ಷಾದಿ ಯಾವ ಪುರುಷಾರ್ಥವೂ ಗೋಚರವಾಗಲಾರದು; ಕರ್ಮಜ್ಞಾನಭಕ್ತಿಯೇ ಮೊದಲಾದ ಯಾವ ಸಾಧನವೂ ನಿಲ್ಲಲಾರದು. ಕಾಮವು ಕರ್ಮರೂಪವಾಗಿ ಪರಿಣಮಿಸಿದರೆ, ಕರ್ಮಯೋಗವು ಹುಟ್ಟುವುದು; ಜ್ಞಾನಮಯವಾದರೆ ಜ್ಞಾನಯೋಗವು ಹುಟ್ಟುವುದು. ವಿದ್ಯೆ, ಬುದ್ಧಿ, ಸೌಂದರ್ಯ, ಶೃಂಗಾರ, ಪ್ರೇಮ ಇವುಗಳನ್ನು ಅಖಂಡವಾಗಿ ಸಾಧಿಸಿರತಕ್ಕ ಜನತೆಯು ಎಂದಿಗೂ ದುರವಸ್ಥೆಯನ್ನು ಪಡೆಯಲಾರದು. ಲೋಕದಲ್ಲಿ ಮನುಷ್ಯನು ಸ್ತ್ರೀಕಾಮದ ಸಲುವಾಗಿಯಲ್ಲವೇ ತನ್ನ ಸಕಲ ಶಕ್ತಿಸಾಹಸಗಳನ್ನೂ ವಿನಿಯೋಗಿಸುತ್ತಾ ಅನವರತವೂ ದುಡಿಯುತ್ತಿರುವನು? ದೇವತೆಗಳು ಪ್ರೇಮಾರ್ಥಿಗಳಾದರೆ ವಿದ್ಯಾಬುದ್ಧಿಗಳಲ್ಲಿ ಪರಿಣತಿಯನ್ನು ಪಡೆದು, ತಮ್ಮ ಶಕ್ತಿ ಇರುವ ವರೆಗೂ ಪ್ರಯತ್ನ ನಡೆಯಿಸಿ, ಈಗಿನ ದುರವಸ್ಥೆಯಿಂದ ಉದ್ಧಾರರಾಗಬಲ್ಲರು.

**ಇಂದ್ರ**:— ರೋಗ, ರುಜೆ, ಮುಪ್ಪು, ಜಡತನ, ಹಸಿವು ಮೊದಲಾದ ಕೋಟಲೆಗಳಿಗೆ ಸಿಕ್ಕಿರುವ ಜೀವಿಗೆ ಶೃಂಗಾರಪ್ರೇಮದ ಚಿಂತೆ ಹೇಗೆ ಹುಟ್ಟಲಾದೀತು? ಅಸುರರಿಂದ ಪರಿಪರಿಯಾಗಿ ಭಂಗಪಟ್ಟು, ಅತಿ ದೀನರಾಗಿರುವ ನಮ್ಮ ದೇವತೆಗಳು, ಈಗ ಕಾಮಪುರುಷಾರ್ಥವನ್ನು ಪರಿಗ್ರಹಿಸಲು ತೀರ ಅಶಕ್ತರಾಗಿರುವರು.

**ಗುರು:**— ಸದ್ಯದ ಸ್ಥಿತಿಯಲ್ಲಿ ನಿಮ್ಮ ಮಂಗಳಕ್ಕೆ ಅರ್ಥಪುರುಷಾರ್ಥವು ಏಕಮಾತ್ರ ಉಪಾಯವಾಗಿದೆ

**ನಾರದ:**— ಜೀವಿಗೆ ಬಯಕೆಗಳು ಅನಂತವಾಗಿರುವುವು. ಇವುಗಳಲ್ಲಿ ಪುಂಸ್ತ್ರೀಕಾಮ ಎಂಬುದು ಒಂದು ಬಯಕೆ ಮಾತ್ರವಾಗಿದೆ. ಸಕಲ ವಿಧವಾದ ಬಯಕೆಗಳಿಗೂ ಕಾಮವೆಂದು ಯೌಗಿಕವಾಗಿ ಹೇಳುವರು. ಪುಂಸ್ತ್ರೀಕಾಮಕ್ಕೆ ಮಾತ್ರ ಕಾಮವೆಂದು ರೂಢಿಬಂದಿದೆ. ಯೌಗಿಕಾರ್ಥದ ಕಾಮವು ಯಾರಿಗೂ ಪುರುಷಾರ್ಥವಾಗಲಾರದು. ಪುರುಷಾರ್ಥ ಎಂದರೆ: ಅಸಂಖ್ಯ ಬಯಕೆಗಳಲ್ಲಿ ಉತ್ತಮಾಧಮ ಭೇದವನ್ನು ತಿಳಿದು,ಅತೀಶ್ರೇಷ್ಠವಾದ ಬಯಕೆಯೊಂದನ್ನು ಧ್ಯೇಯವಾಗಿ ಆರಿಸಿಕೊಳ್ಳುವುದು—ಎಂದರ್ಥ. ಮನಸ್ಸಿನಲ್ಲಿ ಹುಟ್ಟತಕ್ಕ ಅಖಿಲ ಮನೋರಥವೂ ಪುರುಷಾರ್ಥವಾಗುವುದೆಂದರೆ ಜೀವನಕ್ಕೆ ವ್ಯವಸ್ಥೆಯೇ ಹೋಗಿಬಿಡುವುದು. 'ಸ್ತ್ರೀಪುರುಷಕಾಮ ಅಥವಾ ರತಿಕಾಮವೇ ಪುರುಷಾರ್ಥ' ಎಂಬುದು ನಿಜವಾಗಿ ವಾತ್ಸಾಯನನ ಮತವು. ರತಿಕಾಮವನ್ನು ಮುಖ್ಯಧ್ಯೇಯವೆಂದು ಉಪಾಸಿಸತಕ್ಕವನಿಗೆ ದೇವರು, ಮೋಕ್ಷ, ಭಕ್ತಿ, ಧರ್ಮ, ಜ್ಞಾನ ಮೊದಲಾದ ಅನರ್ಘ್ಯಧ್ಯೇಯಗಳೆಲ್ಲವೂ ನಷ್ಟವಾಗುವುವು. ಸಕಲವಿಧವಾದ ಕಾಮಗಳೂ ರತಿಕಾಮದಲ್ಲಿ ಕೊನೆಗಾಣುತ್ತವೆಂದೂ ರತಿಕಾಮವೇ ಸಕಲ ವಿಧವಾದ ಬಯಕೆಗಳಿಗೂ ಮೂಲಾಧಾರವೆಂದೂ ತಿಳಿದು, ಕೆಲವರು ಕಾಮಪುರುಷಾರ್ಥದಿಂದ ಸಕಲ ಮನೋರಥಗಳೂ ಸಿದ್ಧಿಸುತ್ತವೆಯೆಂದು ಹೇಳುವರು ಈ ಅಭಿಪ್ರಾಯವು ಸತ್ಯವಾದುದಲ್ಲ. ರತಿಕಾಮದಂತೆಯೇ ಆಹಾರ ನಿದ್ರಾ ಭಯಪ್ರವೃತ್ತಿಗಳೂ ಅಪರಿಹಾರಕಗಳಾಗಿವೆ. ಯಾರೂ ಆಹಾರವನ್ನು ಬಿಡಲಾಗುವುದಿಲ್ಲ. ಹಸಿವಡಗಿದ ಮಾತ್ರಕ್ಕೆ ಜೀವಿಯ ಸಕಲ ಬಯಕೆಗಳೂ ತೃಪ್ತಿಯಾಗುವುದಿಲ್ಲ. ಹಸಿವು,ಬಾಯಾರಿಕೆ, ನಿದ್ರೆಗಳಂತೆ ಅನಿವಾರಣೀಯವಾಗಿರುವ ರತಿಕಾಮವನ್ನು, ಮೂಲೋತ್ಪಾಟನ ಮಾಡಲು ಪ್ರಯತ್ನಿಸುವುದು ಅಸಂಗತವೆಂದು, ಭಕ್ತಿಮತದವರಾದ ನಾವು ಒಪ್ಪುತ್ತೇವೆ. ಈ ರತಿಕಾಮರಾಗವನ್ನು ನಿಗ್ರಹಿಸದೆ ಅನುಭವಿಸಬಹುದೆಂದೂ ಆದರೆ,ಅದನ್ನು ಭಗವನ್ಮುಖವಾಗಿ ತಿರುಗಿಸಿಕೊಂಡರೆ ಮಾತ್ರ ಹೀಗೆ ಮಾಡಬಹುದೆಂದೂ ಭಕ್ತಿ

ಮತವು ಹೇಳುವುದು. 'ಸಕಲರೂ ತಮ್ಮ ಕಾಮರಾಗಕ್ಕೆ ಭಗವಂತನನ್ನು ಗುರಿಮಾಡಿಕೊಂಡು ಅನುಭವ ಮಾಡುವುದೇ ಭಕ್ತಿ' ಎನ್ನಿಸುವುದು. ಪರಮಾತ್ಮನಿಗಿಂತಲೂ ಜೀವಿಗೆ ಅಧಿಕಪ್ರಿಯರು ಯಾರಿರುವರು? ಅವನಲ್ಲಿ ನಮ್ಮ ಸಕಲಪ್ರೇಮವನ್ನೂ ಬಯಕೆಗಳನ್ನೂ ಸಮರ್ಪಣ ಮಾಡುವುದರಿಂದ ತದನುಭವ ಸುಖವೂ ಭಗವದನುಗ್ರಹದಿಂದ ಸಕಲೇಷ್ಟಾರ್ಥಪ್ರಾಪ್ತಿಯೂ ಉಂಟಾಗುವುವು. ದೇವೇಂದ್ರ, ನೀವು ತ್ರಿಮೂರ್ತಿಗಳ ಅನುಗ್ರಹವಿಲ್ಲದೆ ಉದ್ಧಾರರಾಗಲಾರಿರಿ. ನಾಸ್ತಿಕರಾಗಿ ಅರ್ಥಕಾಮಗಳನ್ನು ಉಪಾಸಿಸಿ, ಸ್ವಪ್ರಯತ್ನದಿಂದ ಅಸುರಬಾಧೆಯನ್ನು ನಿವಾರಿಸಿಕೊಳ್ಳುವುದು ನಿಮಗೆ ಅಸಾಧ್ಯ. ಯಜ್ಞ, ತಪಸ್ಸು, ಧರ್ಮಾಚರಣೆ, ಜ್ಞಾನ ಮೊದಲಾದ ಉಪಾಯಗಳಿಗಿಂತಲೂ ಭಕ್ತಿಯಿಂದ ನೀವು ದೇವರನ್ನು ಅತಿ ಸುಲಭವಾಗಿ ಒಲಿಸಿಕೊಂಡು ಏಳಿಗೆಯನ್ನು ಪಡೆಯಬಲ್ಲಿರಿ.

**ಅಗಸ್ತ್ಯ**:— ಭಕ್ತಿಯು ದೇವತೆಗಳ ಪರಾವಲಂಬನೆಯನ್ನು ಅನಂತವಾಗಿ ಹೆಚ್ಚಿಸುವುದು. ವಿಷಯಪ್ರವೃತ್ತಿಗಳೆಲ್ಲದರಿಂದಲೂ ನಮ್ಮ ರಾಗಗಳನ್ನು ಹಿಂದಕ್ಕೆ ಎಳೆದುಕೊಂಡು, ಬೇರೆ ಕಡೆಗೆ ತಿರುಗಿಸುತ್ತೇನೆಂದು ಹೇಳುವುದು ಕನಸಿನ ಬಯಕೆಯೇ ಸರಿ. ದೇಹಸಂಬಂಧವುಳ್ಳ ಯಾವ ಪ್ರಾಣಿಯೂ ಹೀಗೆ ಮಾಡಲಾರದು. ವಿಷಯ ಪ್ರವೃತ್ತಿಗಳು ದೇಹದ ಬಯಕೆಯನ್ನು ತೃಪ್ತಿಪಡಿಸತಕ್ಕವು. ದೇಹವಿರುವ ವರೆಗೂ ಅವುಗಳನ್ನು ನಿಗ್ರಹಿಸಲಾಗುವುದಿಲ್ಲ. ಹಸಿವು ಆಹಾರಕಾಮನೆಯನ್ನು ಹುಟ್ಟಿಸುವುದು; ಆಹಾರಸೇವನೆಯಿಂದ ಈ ರಾಗವು ತೃಪ್ತವಾಗುವುದು. ಆಹಾರವು ಪ್ರಕೃತಿದ್ರವ್ಯದಿಂದ ನಿರ್ಮಿತವಾಗುವುದು. ಇಂತಹ ದ್ರವ್ಯವನ್ನು ಸೇವನೆ ಮಾಡುವುದು ವಿಷಯವಾಸನೆಯಾಗುವುದು. ಇದನ್ನು ಭಗವನ್ಮುಖವಾಗಿ ತಿರುಗಿಸುವುದೆಂದರೆ ಪ್ರಾಕೃತಿಕಆಹಾರವನ್ನು ಬಿಟ್ಟು, ದೇವರನ್ನೇ ಆಹಾರವೆಂದು ಸೇವಿಸಬೇಕಾಗುವುದು. ಹಾಗೆ ಮಾಡುವುದರಿಂದ ಒಂದು ಪಕ್ಷ ಆತ್ಮದ ಹಸಿವಡಗಿದರೂ ದೇಹದ ಹಸಿವು ಎಂದಿಗೂ ಅಡಗಲಾರದು. ಮತಧರ್ಮದ ಇತರ ಮಾರ್ಗಗಳಂತೆಯೇ ಭಕ್ತಿಮಾರ್ಗವು ನಮ್ಮ ಆತ್ಮಕಲ್ಯಾಣಕ್ಕಾಗಿ ದೇಹವನ್ನು ಬಲಿಕೊಡಲು

ಪ್ರಯತ್ನಿಸುವುದು. 'ದೇಹವು ಆತ್ಮಕ್ಕೆ ಶತ್ರು' ಎಂಬ ತಪ್ಪುತಿಳಿವಳಿಕೆಯು ಇದಕ್ಕೆ ಕಾರಣವಾಗಿದೆ. ದೇಹವಿಲ್ಲದೆ ಆತ್ಮವು ಎಂದಿಗೂ ಇರಲರಿಯದು. ಮುಕ್ತಿದೆಸೆಯಲ್ಲಿ ಸಹ ಅಪ್ರಾಕೃತವಾದ ದೇಹವು ಆತ್ಮನಿಗೆ ಇರುವುದು. ಆತ್ಮನು ತನ್ನ ಜ್ಞಾನ, ಬಲ, ಶಕ್ತಿ, ಆನಂದ ಮೊದಲಾದುವುಗಳನ್ನು ಶರೀರದ ಮೂಲಕ ಸಾಧಿಸಿ, ಅನುಭವ ಮಾಡಬೇಕಾಗಿರುವುದು. ದೇಹದ ಯೋಗಕ್ಷೇಮವನ್ನು ನೋಡಿಕೊಳ್ಳುವುದು, ಆತ್ಮೋನ್ನತಿಗೆ ಅತ್ಯಾವಶ್ಯಕವಾದ ಉಪಾಯವಾಗಿದೆ. ದೇಹವೂ ತನ್ಮೂಲವಾದ ಪ್ರಕೃತಿಯೂ ಶಕ್ತಿಮಯವಾಗಿವೆ ಇವುಗಳನ್ನು ವಶಪಡಿಸಿಕೊಂಡು ಹಿತಕರವಾಗಿ ಉಪಯೋಗಪಡಿಸಿಕೊಂಡರೆ, ದೇಹಾತ್ಮಗಳೆರಡೂ ಸಮಂಜಸವಾಗಿ ಶ್ರೇಯಸ್ಸನ್ನು ಪಡೆಯುವುವು. ಈ ಶಕ್ತಿಗಳನ್ನು ವಶಪಡಿಸಿಕೊಂಡ ಜೀವಿಯು, ಸ್ವಾವಲಂಬನೆಯಿಂದ ಶತ್ರುಗಳನ್ನು ನಿಗ್ರಹಿಸಿ ಆಟ್ಟಹಾಸದಿಂದ ಜೀವಿಸಬಹುದು. ಈ ಶಕ್ತ್ಯುಪಾಸನೆಯೇ ಸಕಲರಿಗೂ ಸರ್ವಶ್ರೇಷ್ಠವಾದ ಧ್ಯೇಯವಾಗಿದೆ. "ನಾಯಮಾತ್ಮಾ ಬಲಹೀನೇನ ಲಭ್ಯಃ" ಎಂದು ಶ್ರುತಿ ಹೇಳುವುದು. ಜೀವನವು ಶಕ್ತಿಮಯವಾದಷ್ಟು ಶ್ರೇಯಸ್ಸು ಹೆಚ್ಚುವುದು. ದೇವತೆಗಳು ಈಗಿನ ದುರವಸ್ಥೆಯನ್ನು ಪರಿಹರಿಸಿಕೊಳ್ಳಬೇಕಾದರೆ, ಶಕ್ತಿಮಯಿಯಾದ ಪ್ರಕೃತಿಯನ್ನು ರಾಜಯೋಗದಿಂದ ವಶಪಡಿಸಿಕೊಳ್ಳಬೇಕು.

**ನಾರದ:—** ದೇಹದಲ್ಲಿಲ್ಲದ ಶಕ್ತಿಯು ಪ್ರಕೃತಿಯಲ್ಲಿದ್ದೀತೋ? ದೇಹದಲ್ಲೂ ಪ್ರಕೃತಿಯಲ್ಲೂ ಇರತಕ್ಕ ಶಕ್ತಿಗಳನ್ನು ಯೋಗಾಭ್ಯಾಸದಿಂದ ಸಾಧಿಸುವುದು ಸಕಲರಿಗೂ ಸಾಧ್ಯವಿಲ್ಲ. ಆಪದೆಸೆಯಿಂದ ಅತಿದೀನರಾಗಿ ದುಃಖಿಸುತ್ತಿರುವ ದೇವತೆಗಳು ರಾಜಯೋಗಕ್ಕೆ ತೀರ ಅನಧಿಕಾರಿಗಳಾಗಿರುವರು. ಅವರ ಸ್ಥಿತಿಗೆ ಸುಲಭೋಪಾಯವು ಭಕ್ತಿಯೊಂದೇ. ಭಕ್ತಿಯಿಂದ ಭಗವಂತನು ಪ್ರಸನ್ನನಾದರೆ, ರಾಜಯೋಗದಿಂದ ಪ್ರಾಪ್ತವಾಗಬಹುದಾದ ಶಕ್ತಿಗಳಿಗಿಂತಲೂ ಹತ್ತುಮಡಿ ಅಧಿಕವಾದ ಶಕ್ತಿಗಳನ್ನು ಅನುಗ್ರಹಿಸಬಲ್ಲನು. ಆಹಾರ ವಿಹಾರಗಳಿಗೆ, ಪ್ರಾಕೃತಿಕ ದ್ರವ್ಯಗಳನ್ನು ಬಿಟ್ಟು ದೇವರನ್ನೇ ವಿಷಯವಾಗಿ ಇಟ್ಟುಕೊಳ್ಳುವ ಸ್ಥಿತಿಯು, ಭಕ್ತಿಯ ಕಡೆಯ ಸೋಪಾನಮಾತ್ರವಾಗಿದೆ. ಭಕ್ತಿಯ

ಪ್ರಥಮಘಟ್ಟಗಳಲ್ಲಿ, ಜೀವಿಯು ತಾನು ಅನುಭವಿಸತಕ್ಕ ವಿಷಯಸುಖ ಗಳನ್ನೂ ತದಾಧಾರವಾದ ಪ್ರಾಕೃತಿಕದ್ರವ್ಯಗಳನ್ನೂ ಭಗವಂತನಿಗೆ ಸಮರ್ಪಣೆ ಮಾಡಿ, ಆತನ ಪ್ರಸಾದರೂಪವಾಗಿ ಅವುಗಳನ್ನು ಅನುಭವಿಸಿ ದರೆ ಸಾಕಾಗಿದೆ.

**ಸನ**:— ಭಕ್ತಿಯನ್ನು ಮೋಕ್ಷಸಾಧನೆಗೆ ಮಾತ್ರ ಇಟ್ಟುಕೊಳ್ಳು ವುದು ಪ್ರಶಸ್ತವೆಂದು ನನ್ನ ಅಭಿಪ್ರಾಯವು. ಐಹಿಕವಿಚಾರಗಳಲ್ಲಿ ಭಕ್ತಿಯು ತನ್ನ ಶುದ್ಧಸ್ವರೂಪವನ್ನು ಕಡೆಯವರೆಗೂ ಉಳಿಸಿಕೊಳ್ಳಲಾ ರದೆ, ವಿರೂಪವನ್ನು ಪಡೆದು ಅನರ್ಥಗಳನ್ನು ಹುಟ್ಟಿಸುವುದು. ಬಹು ಮಂದಿ ದೇವರ ಹೆಸರು ಹೇಳಿಕೊಂಡು, ಸ್ವೇಚ್ಛೆಯಿಂದ ವಿಷಯಸುಖ ಗಳನ್ನು ಸೇವನೆ ಮಾಡುತ್ತ ಮೆರೆಯಲು,ಭಕ್ತಿಮಾರ್ಗವು ಅವಕಾಶವನ್ನು ಕಲ್ಪಿಸುವುದು. ಎಷ್ಟೋ ಪಾಪಗಳನ್ನು ಮಾಡಿದರೂ ಒಂದು ಸಲ 'ಗೋವಿಂದ' ಎಂದು ಹೇಳುವುದರಿಂದ, ಅವುಗಳನ್ನೆಲ್ಲಾ ನಾಶಮಾಡಬಹು ದೆಂದು ಅನೇಕರು ಅರಿತು, ಪಾಪಭೀತಿಯನ್ನು ಕಳೆದುಕೊಂಡಿರುವರು. ಇದರಿಂದ ಭಕ್ತಿಮಾರ್ಗವು ಮಾಯಾಶಕ್ತಿ (Magical Power) ಯನ್ನು ಅಟ್ಟಕ್ಕೇರಿಸಿ, ಅದಕ್ಕೆ ಅತ್ಯಂತ ಪ್ರಾಬಲ್ಯವನ್ನು ಕಲ್ಪಿಸುವುದು. ಬಯಕೆ ಗಳು ನೆರವೇರಲು ಯಾರೂ ದೇಹಶ್ರಮದಿಂದ ಸ್ವಪ್ರಯತ್ನ ಮಾಡಬೇಕಿ ಲ್ಲವೆಂದೂ, ದೇವರಿಗೆ ಮೊರೆಯಿಟ್ಟರೆ ಅವನು ಅವುಗಳನ್ನು ಕುಳಿತ ಕಡೆ ನೆರವೇರಿಸುವನೆಂದೂ ಬಹುಮಂದಿ ತಿಳಿಯುವರು. ಇದರಿಂದ ಶ್ರವಣ, ವಂದನ, ಕೀರ್ತನಾದಿ ಭಕ್ತಿಕಾರ್ಯಗಳು ಮಾಯಾಶಕ್ತಿಮಯವಾದು ವೆಂಬ ಭಾವನೆ ಹುಟ್ಟುವುದು. ಕೀರ್ತನೆಯಲ್ಲಿ ಅರ್ಥಕ್ಕಿಂತಲೂ ಶಬ್ದವು ಅಧಿಕಫಲಪ್ರದವಾದುದೆಂಬ ನಂಬಿಕೆಹುಟ್ಟಿ, ಮಂತ್ರಶಾಸ್ತ್ರ ಎಂಬುದು ತಲೆದೋರುವುದು. ಭಗವಂತನಿಗೆ ನಮ್ಮಲ್ಲಿರತಕ್ಕ ವಸ್ತುಗಳಲ್ಲಿ ಅತ್ಯ ನರ್ಘ್ಯವಾದುವುಗಳನ್ನು ಸಮರ್ಪಿಸುವುದು ನ್ಯಾಯವೇ ಹೊರತಾಗಿ, ನಾವೇ ನಿಕೃಷ್ಟವೆಂದು ತೀರ್ಮಾನಿಸಿರುವವಸ್ತುಗಳನ್ನು ಸಮರ್ಪಿಸುವುದು ಸಾಧುವಲ್ಲ. ಭಕ್ತಿಯು ವಿಶ್ವವ್ಯವಸ್ಥೆಗೆ ವಿರುದ್ಧವಾದ ಅಸಾಧುಬಯಕೆ ಗಳಿಗೆ ವಿಶೇಷಪುರಸ್ಕಾರವನ್ನು ಕೊಡುವುದು. ಬಂಜೆತನ, ಮುಪ್ಪು, ರೋಗ, ಬಡತನ, ವಿದ್ಯೆ, ಬುದ್ಧಿ ಇವು ಸ್ಥಿರವಾದ ವಿಶ್ವನಿಯಮಗಳಿಂದ

ಹುಟ್ಟಿ ಜೀವಿಸುವುವು. ದೇವರು ಈ ನಿಯಮಗಳನ್ನು ಮೀರಿ, ತಮ್ಮ ಬಯಕೆಗಳನ್ನು ನೆರವೇರಿಸಬೇಕೆಂದು ಜನರು ಅವನಿಗೆ ಮೊರೆಯಿಡುವ ಅಭ್ಯಾಸವುಳ್ಳವರಾಗುವರು. ದೇವರು, ಕೆಲಸ ಮಾಡದೆ ಐಶ್ವರ್ಯ ಕೊಡಬೇಕು; ಓದದೆ ವಿದ್ಯೆಯನ್ನುಂಟುಮಾಡಬೇಕು; ಅಭ್ಯಾಸವಿಲ್ಲದೆ ಸಿದ್ಧಿಗಳನ್ನು ಕಲ್ಪಿಸಬೇಕು—ಎಂದು ಜನರು ಬಯಸಲಾರಂಭಿಸುವರು. ಮತ್ತೊಬ್ಬನ ಮನೆ ಮುರಿಯಬೇಕೆಂದು ಬಯಸತಕ್ಕವನು ಸಹ ದೇವರಿಗೆ ಹರಕೆ ಕಟ್ಟುವನು; ಪರಸ್ತ್ರೀಯ ಸತೀತ್ವವನ್ನು ಹಾಳುಮಾಡುವುದಕ್ಕೆ ತನಗೆ ಸಹಾಯಮಾಡಬೇಕೆಂದು ಮತ್ತೊಬ್ಬನು ಪ್ರಾರ್ಥನೆ ಮಾಡುವನು. ಸಕಲ ಪಾಪಿಷ್ಠರೂ ಭಕ್ತಿಮಾರ್ಗವನ್ನು ಅತ್ಯಂತಶ್ರೇಷ್ಠವೆಂದು ತಿಳಿಯುವರು. ತಮ್ಮ ಪಾಪಾಚರಣೆಗೆ ಅತಿ ಸುಲಭವಾಗಿ ದೇವರ ಸಹಾಯವನ್ನು ಪಡೆಯಬಹುದೆಂದೂ, ಬೆಟ್ಟದಂತಹ ಪಾಪರಾಶಿಯನ್ನೂ ಒಂದು ಸಲ 'ಹರಿ' ಎನ್ನುವ ಮಾತ್ರದಿಂದ ಇಂಗಿಸಬಹುದೆಂದೂ ಬಹುಜನರು ನಂಬುವರು. ದೇವರ ಪೂಜೆಯ ಸಲುವಾಗಿ ವಿಗ್ರಹಗಳೂ, ದೇವಾಲಯಗಳೂ, ಉತ್ಸವಗಳೂ, ಹಬ್ಬಹರಿದಿನಗಳೂ ಲೆಕ್ಕವಿಲ್ಲದಂತೆ ಹುಟ್ಟಿ ಹರಡುವುವು. ಭಕ್ತರು ತಮ್ಮ ಇಷ್ಟದೇವತೆಯನ್ನು ಕೊಂಡಾಡುವುದಕ್ಕಾಗಿ ಅನ್ಯದೇವತೆಗಳನ್ನು ವಿವಿಧಪರಿಯಲ್ಲಿ ದೂಷಿಸಿ ದ್ವೇಷಿಸುವರು. ಇದರಿಂದ ವಿವಿಧದೇವತೆಗಳ ಭಕ್ತರಿಗೆ ಲೋಕದಲ್ಲಿ, ದಿನಂಪ್ರತಿ ಯುದ್ಧನಡೆಯುತ್ತಲೇ ಇದೆ. ದೇವರ ಹೆಸರಿನಲ್ಲಿ ಭಕ್ತರು ಕೊಲೆ, ಅಸತ್ಯ, ಕಳ್ಳತನ, ಕಾಪಟ್ಯ, ಅಸಹನೆ, ದ್ವೇಷ ಇವುಗಳನ್ನು ಬುದ್ಧಿಪೂರ್ವಕ ಅವಲಂಬಿಸುತ್ತಿರುವರು. ರಾಗಗಳು ಪಶುಗಳ ವೈಲಕ್ಷಣ್ಯವು. ಜ್ಞಾನವು ಮನುಷ್ಯನ ವೈಲಕ್ಷಣ್ಯವು. ಭಕ್ತಿಯು ಪಶುಧರ್ಮವು. ಜ್ಞಾನವು ಮನುಷ್ಯಧರ್ಮವು.

**ಅಥ:**— ದೇವತೆಗಳ ಉದ್ಧಾರಕ್ಕೆ ನೀವು ವಿಧಿಸತಕ್ಕ ಔಷಧವು ಜ್ಞಾನಯೋಗವೋ?

**ಸನ:**— ಅಹುದು.

**ವಾತ್ಸ್ಯ:**— ಜ್ಞಾನವು ಮೋಕ್ಷಕ್ಕೆ ಸಹಕಾರಿಯಾಗಬಹುದು; ಇತರ ಪುರುಷಾರ್ಥಗಳಿಗೆ ಬಹುದೂರ ಅದು ಅಹಿತವನ್ನಾಚರಿಸುವುದು.

ಲಕ್ಷಕ್ಕೆ ಒಬ್ಬನೂ ಜ್ಞಾನಿಯಾಗುವುದು ದುರ್ಲಭ. ಜ್ಞಾನಯೋಗಕ್ಕೆ ಅಂಗಗಳಾದ ತತ್ವಜಿಜ್ಞಾಸೆ, ಅಧ್ಯಾತ್ಮಚೇತಸ್ಸು, ವಿಶ್ವಚಿತ್ತ, ರಾಗ ಸನ್ನ್ಯಾಸ (ವೈರಾಗ್ಯ), ಕರ್ಮಸನ್ನ್ಯಾಸ, ಧ್ಯಾನಯೋಗ, ಪ್ರಜ್ಞಾನ ಜೀವನ—ಇವು ಯಾವುವೂ ದೇವತೆಗಳಿಗೆ ಸಾಧ್ಯವಿಷಯಗಳಲ್ಲ. ಜ್ಞಾನಿಯಾಗಲು ಆಶಿಸತಕ್ಕವನು 'ನಾನು ಯಾರು? ಪ್ರಪಂಚದ ಮೂಲಸ್ವರೂಪವೇನು? ಸರ್ವದಾ ನಾಶವನ್ನು ಪಡೆಯುತ್ತಿರುವ ಪದಾರ್ಥಗಳಲ್ಲಿ ನಾಶರಹಿತವಾದ ನಿತ್ಯವಸ್ತು ಯಾವುದು?' ಎಂದು ಮುಂತಾಗಿ ಮೂಲ ತತ್ವಗಳನ್ನು ಜಿಜ್ಞಾಸೆ ಮಾಡಬೇಕು; ಇವನ ಮನಸ್ಸು ವಿಷಯಾನು ರಕ್ತಿಯನ್ನು ಬಿಟ್ಟು, ತತ್ವಜ್ಞಾನದಲ್ಲಿ ಅನುರಕ್ತಿಪಡೆಯಬೇಕು. ಇವನ ಕರ್ಮವು ಆಯಾದೇಶಕಾಲಾವಸ್ಥೆಗಳಿಗನುಗುಣವಾದ ಸಂಕುಚಿತ ದೃಷ್ಟಿಯನ್ನು ಬಿಟ್ಟು, ವಿಶ್ವವ್ಯಾಪಿಯಾದ ತಾತ್ವಿಕಧ್ಯೇಯಗಳಿಂದ ಸ್ಪಷ್ಟವಾಗಬೇಕು; ಇವನು ರಾಗಗಳನ್ನೂ ಕರ್ಮಗಳನ್ನೂ ನಿಗ್ರಹಿಸಿ ಸನ್ನ್ಯಾಸವನ್ನವಲಂಬಿಸಬೇಕು; ಧ್ಯೇಯಗಳನ್ನು ತದೇಕಧ್ಯಾನದಿಂದ ಮನಸ್ಸಿನಲ್ಲಿ ಧಾರಣಮಾಡಬೇಕು; ಕ್ರಮವಾಗಿ ಇವನ ಜೀವನವೆಲ್ಲವೂ ಪ್ರಜ್ಞಾನಮಯವಾಗಿ ಬಿಡಬೇಕು. ಇವು ದೇವತೆಗಳಿಗೆ ಸ್ವಲ್ಪವೂ ಸಾಧ್ಯವಿಲ್ಲ. ಈ ಮಾರ್ಗಗಳಿಂದ ದೇವತೆಗಳು ತಮ್ಮ ನಷ್ಟಭಾಗ್ಯವನ್ನು ಎಂದಿಗೂ ಪಡೆಯಲಾರರು. ಆನ್ವೀಕ್ಷಕಿಯೊಂದರಿಂದಲೆ ಲೋಕಕಲ್ಯಾಣವು ಸಾಗಲಾರದು.

**ಅಗಸ್ತ್ಯ**:— ಜ್ಞಾನಮಾರ್ಗವು ಔಪನಿಷದಿಕ, ನಾಸ್ತಿಕ, ದಾರ್ಶನಿಕ ಎಂದು ಮೂರು ಪ್ರಕಾರವಾಗಿದೆ. ಮೊದಲನೆಯದು ಬ್ರಹ್ಮಮತವು. ಇದು ತತ್ವಗಳನ್ನೂ ತಾತ್ವಿಕ ಜೀವನವನ್ನೂ ಕುರಿತು, ಒಗಟಿಗಳಂತೆ ಕೆಲವು ಮೂಲ ನಿಯಮಗಳನ್ನು ಮಾತ್ರ ತಿಳಿಸುತ್ತ, ನಿವೃತ್ತಿಮಾರ್ಗವನ್ನು ಉಪದೇಶಿಸುವುದು. ತತ್ವಶೋಧನೆಯನ್ನು ಸಮಗ್ರವಾಗಿ ಸಮಾಲೋಚನೆ ಮಾಡತಕ್ಕದ್ದು ದಾರ್ಶನಿಕಮತವು. ಈ ತತ್ವಶೋಧನೆಯು ಶ್ರುತಿ ಪ್ರಮಾಣವನ್ನು ನಿರಾಕರಿಸಿ ನಡೆದರೆ, ನಾಸ್ತಿಕಮತವು ಹುಟ್ಟುವುದು. ಜ್ಞಾನಮಾರ್ಗವನ್ನು ಹಿಡಿಯತಕ್ಕವರು ಅತಿ ಸುಲಭವಾಗಿ ನಾಸ್ತಿಕರಾಗುವ ಸಂಭವವಿದೆ. ಆದ್ದರಿಂದ ಈ ಮಾರ್ಗವು ಅಪಾಯಕರವೇ ಸರಿ.

**ಗುರು:**— ನಿಮ್ಮ ಈ ಶುಷ್ಕಚರ್ಚೆಯಿಂದ ಇಂದ್ರನಿಗೆ ಎಳ್ಳಷ್ಟೂ ಪ್ರಯೋಜನವಿಲ್ಲ. ದೇವತೆಗಳು ಮೋಕ್ಷಪುರುಷಾರ್ಥಿಗಳಾಗಲಾರ ರಾದ್ದರಿಂದ, ತತ್ಸಾಧಕವಾದ ಜ್ಞಾನ, ರಾಜಯೋಗ, ಭಕ್ತಿ, ನಿಷ್ಕಾಮ ಕರ್ಮ, ಪ್ರಪತ್ತಿ, ಮಂತ್ರಯೋಗ ಮೊದಲಾದ ಮಾರ್ಗಗಳ ಗುಣಾವ ಗುಣಗಳ ಪರಿಶೀಲನೆಯು ತೀರ ಅಪ್ರಕೃತವಾಗಿದೆ. ದೇವತೆಗಳ ದುಸ್ಥಿತಿಯನ್ನು, ಧರ್ಮ ಅಥವಾ ಕಾಮ ಪುರುಷಾರ್ಥಗಳು ಹೋಗಲಾ ಡಿಸಲು ಅಸಮರ್ಥವಾಗಿವೆ. ಆದ್ದರಿಂದ ಅವರು ಅರ್ಥ ಒಂದನ್ನೇ ಪುರ ಸ್ಕರಿಸಬೇಕು.

**ಮೇಧಾ:** -- ನನ್ನ ಬುದ್ಧಿಗೆ ಧರ್ಮಪುರುಷಾರ್ಥವೇ ಸಕಲರಿಗೂ ಮುಖ್ಯಧ್ಯೇಯವಾಗಿರಬೇಕೆಂದು ತೋರುತ್ತದೆ. ಧರ್ಮವು ವಿಧಿ-ನಿಷೇಧರೂಪವಾಗಿದೆ. ಈ ವ್ಯವಸ್ಥೆಯು ಶಾಸ್ತ್ರದಿಂದ ಹುಟ್ಟುವುದು ಧರ್ಮಶಾಸ್ತ್ರಕ್ಕೆ ವೇದವು ಮೂಲಾಧಾರವಾಗಿದೆ. ಆದ್ದರಿಂದ ಶ್ರುತಿ ಸ್ಮೃತಿಪ್ರೋಕ್ತ ಕರ್ಮಗಳನ್ನು ಮಾಡುವುದು ನಮ್ಮ ಶ್ರೇಯಸ್ಸಿಗೆ ತಳಹದಿಯಾಗಿದೆ. ನಮಗೆ ಆನ್ವೀಕ್ಷಕಿಯ ಗೊಂದಲವು ಬೇಕಿಲ್ಲ. ತ್ರಯಿಾ ಶಾಸ್ತ್ರವೂ ತದನುಗುಣವಾದ ವಾರ್ತಾ ದಂಡನೀತಿಗಳೂ ಇದ್ದರೆ ಸಾಕು. ದೇವರಾಜ, ನಿಮ್ಮ ದೇವಕುಲದವರು ಧರ್ಮಾಚರಣೆಯನ್ನು ಬಿಟ್ಟರು; ಅವರ ಪ್ರಜೆಗಳಾದ ಲೋಕದ ಮನುಷ್ಯರೂ ಹಾಗೆಯೇ ಮಾಡಿದರು. ಮನುಷ್ಯರು ಧರ್ಮಚ್ಯುತರಾಗದಂತೆ ನೀವು ನೋಡಿಕೊಳ್ಳಬೇಕಾ ಗಿತ್ತು. ನೀವು ಹಾಗೆ ಮಾಡದೆ ಹೋದುದರಿಂದ ಲೋಕದಲ್ಲಿ ಯಜ್ಞ, ದಾನ,ತಪಸ್ಸು, ಸ್ವಾಧ್ಯಾಯ,ವರ್ಣಾಶ್ರಮಧರ್ಮರೂಪವಾದ ಕರ್ಮಗಳೆ ಲ್ಲವೂ ಖಿಲವಾಗಿ ಬಿಟ್ಟಿವೆ. ಭೂಲೋಕದವರು ಈ ಕರ್ಮಗಳನ್ನು ಸರಿ ಯಾಗಿ ಮಾಡುತ್ತಿದ್ದರೆ ಅವರೂ ಚೆನ್ನಾಗಿ ಬಾಳಿ, ನಿಮಗೂ ನಿಯತವಾಗಿ ಕಪ್ಪವನ್ನು ಸಲ್ಲಿಸಬಹುದಾಗಿತ್ತು. ಅದು ತಪ್ಪಿದ್ದರಿಂದ ನೀವು ನಿಮ್ಮ ವಿಲಾಸಕ್ಕಾಗಿ ಮನುಷ್ಯಕುಲದವರ ಬದುಕನ್ನು, ದರೋಡೆ ಸುಲಿಗೆ ಮಾಡಿ ಜೀವಿಸುತ್ತಿದ್ದೀರಿ. ಇಂತಹ ಪ್ರಜೆಗಳು ನಿಮಗೆ ಶತ್ರುಬಾಧೆ ಯುಂಟಾದಾಗ ನೆರವಾಗುತ್ತಾರೆಯೇ? ದೇವೇಂದ್ರ, ನೀನು ಧರ್ಮವಿದ ರಾದ ಋಷಿಗಳನ್ನು ಭೂಲೋಕಕ್ಕೆ ಎಲ್ಲಾ ಕಡೆಗೂ ಕಳುಹಿಸಿ, ಧರ್ಮ

ವನ್ನು ಸಂಸ್ಥಾಪನೆ ಮಾಡಿಸು. ಆಗ ನಿಮ್ಮ ಬಲವು ಹೆಚ್ಚಿ ನೀವು ಸುಲಭವಾಗಿ ತ್ರಿಪುರವನ್ನು ಜಯಿಸುತ್ತೀರಿ.

**ನಾರದ:**—ಈ ಯುಗದಲ್ಲಿ ಈ ಶುಷ್ಕ ಕರ್ಮದಿಂದ ಏನೂ ಪ್ರಯೋಜನವಿಲ್ಲ. ಶಾಸ್ತ್ರೋಕ್ತ ಧರ್ಮವು-ಸಂಪೂರ್ಣವಾಗಿ-ಯಾವುದೊಂದು ಕಾಲದಲ್ಲೂ ಆಚರಣೆಯಲ್ಲಿ ಇರಲಿಲ್ಲ; ಹಾಗೆ ಇರುವುದೂ ಅಸಾಧ್ಯ. ಅದನ್ನು ಈಗಿನ ಕ್ಷೀಣಯುಗದಲ್ಲಿ ಸಂಸ್ಥಾಪನೆ ಮಾಡುವುದಕ್ಕೆ ನಿಮ್ಮಿಂದ ಸಾಧ್ಯವೇ? ಖಿಲವಾಗಿರುವ ಧರ್ಮವನ್ನು ಸಂಸ್ಥಾಪನೆ ಮಾಡಲು ಭಗವಂತನೊಬ್ಬನೇ ಅಧಿಕಾರಿಯು. ಅವನ ಅನುಗ್ರಹವನ್ನು ಭಕ್ತಿಯಿಂದ ಸಂಪಾದಿಸದೆ ಹೋದರೆ,ಧರ್ಮವು ಪುನರುತ್ಥಾಪನೆ ಪಡೆಯಲಾರದು. ಈಗಿನ ಕಾಲದಲ್ಲಿ ನೀವು ಯಾವ ಸಿದ್ಧಿಯನ್ನು ಬಯಸಿದರೂ ಭಗವದ್ಭಕ್ತಿಯಿಂದ ಮಾತ್ರವೇ ಅದನ್ನು ಪಡೆಯಬಲ್ಲಿರಿ.

**ಅಗಸ್ತ್ಯ:**—ಧರ್ಮಸಾಧನೆಯಿಂದ ಐಹಿಕಶ್ರೇಯಸ್ಸಿಗೆ ಎಳ್ಳಷ್ಟೂ ಉಪಯೋಗವಿಲ್ಲ. ಅರ್ಥಕಾಮಗಳಲ್ಲಿ ಮನುಷ್ಯನ ಪ್ರವೃತ್ತಿಯು ಸ್ವಾಭಾವಿಕವಾಗಿರುವುದು. ಧರ್ಮಶಾಸ್ತ್ರವು ಈ ಸಹಜಪ್ರವೃತ್ತಿಯನ್ನು ಎದುರಿಸಿ, ತದ್ವಿರುದ್ಧವಾದ ವಿಧಿಗಳನ್ನು ಕಲ್ಪಿಸಿರುವುದರಿಂದ ಬಹುಮಂದಿಗೆ ನಿರರ್ಥಕವಾಗಿ ಹಿಂಸೆಯನ್ನು ಕೊಡುತ್ತಿದೆ. ಇಷ್ಟಾದರೂ ಕರ್ಮಮಾರ್ಗವು ಮನುಷ್ಯನ ರಾಗದ್ವೇಷಾದಿಗಳನ್ನು ನಿಗ್ರಹಿಸಿ,ವೈರಾಗ್ಯವನ್ನು ಹುಟ್ಟಿಸಲಾರದು. ಈ ಮಾರ್ಗದಲ್ಲಿ ಬುದ್ಧಿಗೆ ಸ್ವಲ್ಪವೂ ವ್ಯವಸಾಯವಿರುವುದಿಲ್ಲ. ಒಂದು ಪುಣ್ಯವನ್ನು ಮಾಡುವುದಕ್ಕೆ ತೊಡಗಿದರೆ ಹತ್ತು ಪಾಪಗಳು ಬಂದು ಅಂಟುವುವು. ಇವುಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವಾಗ ನೂರಾರು ಹೊಸಪಾಪಗಳು ತಲೆಹಾಕುವುವು. ಕರ್ಮಠನು ಈ ದುಷ್ಟಪರಂಪರೆಯ ಬಂಧನದಿಂದ ಎಂದಿಗೂ ಪಾರಾಗಲಾರನು, ತಾತ್ವಿಕದೃಷ್ಟಿಯಿಂದ ಪರೀಕ್ಷಿಸಿದರೆ, ಧರ್ಮವು 'ಅಪೂರ್ವ' ಎಂಬ ಫಲವನ್ನು ಹುಟ್ಟಿಸುವುದು—ಎಂದು ಹೇಳುವರು. ಈ 'ಅಪೂರ್ವ' ಎಂಬುದು ಒಂದು ವಿಚಿತ್ರ ಮಾಯಾಕಲ್ಪನೆಯೇ ಹೊರತು ಬೇರೆಯೇನೂ ಅಲ್ಲ ಇದು ದ್ರವ್ಯವೇ ಅದ್ರವ್ಯವೇ? ಮೂರ್ತವೇ ಅಮೂರ್ತವೇ? ಚೇತನವೇ ಅಚೇತನವೇ? ಎಂದರೆ ಯಾರೂ ಏನೂ ಹೇಳರು. ಈ ಅಪೂರ್ವವು

ತನ್ನ ಮಾಯಾಶಕ್ತಿಯಿಂದ ಸ್ವರ್ಗ ನರಕ ಲೋಕಗಳನ್ನೂ ಹೊಸಜನ್ಮಗಳನ್ನೂ ಕಲ್ಪಿಸುತ್ತಾ ಬರುವುದಂತೆ. ಧರ್ಮಿಷ್ಠನು ಪುಣ್ಯಲೋಕಗಳನ್ನೂ ಪುಣ್ಯಜನ್ಮಗಳನ್ನೂ ಪಡೆಯುತ್ತಾನಂತೆ; ಪಾಪಿಷ್ಠನು ಪಾಪಲೋಕಗಳನ್ನೂ ನೀಚಜನ್ಮಗಳನ್ನೂ ಪಡೆದು ದುಃಖಪಡುವನಂತೆ. ಈ ಸ್ವರ್ಗ ನರಕ ಲೋಕಗಳು ಎಲ್ಲಿವೆ? ಅಲ್ಲಿ ಯಾರಿರುವರು? ಎಂಬ ಪ್ರಶ್ನೆಗೆ ಕರ್ಮಶಾಸ್ತ್ರಜ್ಞರು ಸದುತ್ತರ ಕೊಡಲಾರರು. ಏಕೆಂದರೆ, ಇವರು ಉದಹರಿಸುವ ಶಾಸ್ತ್ರವೇ ದೇವತೆಗಳ ಲೋಕವು ಸ್ವರ್ಗವೆಂದು ಹೇಳುತ್ತಿರುವಾಗ, ಇವರು ಈ ದೇವತೆಗಳೆಂಬವರೇ ಇಲ್ಲವೆಂದು ಸಾಧಿಸುತ್ತಿರುವರು. ಧರ್ಮವು ಅನುಗ್ರಹಿಸತಕ್ಕ ಸುಖವೂ ಅಧರ್ಮವು ಕಲ್ಪಿಸತಕ್ಕ ದುಃಖವೂ ಸ್ಪಷ್ಟವಾಗಿ ಕಾಯಿಕವಾಗಿವೆ. ಈ ಸುಖ ದುಃಖಗಳು ನಶ್ವರನೆಂದು ಕರ್ಮಠರೇ ಒಪ್ಪುವರು. ಹಾಗಾದರೆ ಧರ್ಮದಿಂದ ಶಾಶ್ವತವಾದ ಸಚ್ಚಿದಾನಂದಸಂಪದವು ಎಂದಿಗೂ ಬರಲಾರದು. ಹೀಗೆ ಧರ್ಮಸಾಧಕವಾದ ಕರ್ಮಮಾರ್ಗವು ಐಹಿಕಶ್ರೇಯಸ್ಸನ್ನಾಗಲಿ ,ಪಾರಮಾರ್ಥಿಕ ನಿಶ್ರೇಯಸ್ಸನ್ನಾಗಲಿ ಸಾಧಿಸಲು ಅಶಕ್ತವಾಗಿದೆ.

**ಸನ:—** ಕರ್ಮವನ್ನು ನಿಷ್ಕಾಮದಿಂದಲಾದರೂ ಮಾಡಿದರೆ ಅದರಲ್ಲಿ ವೈರಾಗ್ಯವೂ ಬುದ್ಧಿವ್ಯವಸಾಯವೂ ಜ್ಞಾನಲಾಭವೂ ಭಕ್ತಿಪ್ರವೃತ್ತಿಯೂ ಹುಟ್ಟಿ, ಕರ್ಮಠನು ಮೋಕ್ಷಾರ್ಥಿಯಾಗಿ ಪರಿಣಮಿಸುವನು. ಬರಿಯ ಕರ್ಮಮಾರ್ಗದಿಂದ ಯಾವ ಫಲವೂ ಇಲ್ಲ ಕರ್ಮಮಾರ್ಗವು ದೀನರನ್ನು ಮತ್ತಷ್ಟು ಹಳ್ಳಕ್ಕೆ ತುಳಿಯುವುದು. ದೀನರಾಗಿದ್ದ ಅಸುರರು ಈಗ ಕರ್ಮದಿಂದ ಲೋಕಾಧಿಪತ್ಯವನ್ನು ಪಡೆದಿಲ್ಲ. ಈ ಕಾಲಕ್ಕೆ ಗೊತ್ತು ಕರ್ಮದಿಂದ ಲಾಭವಿಲ್ಲವೆಂದು ಅಸುರರು ಗಾಯತ್ರಿಸಿದ್ಧಿಯನ್ನು ಪಡೆದು, ಬ್ರಹ್ಮೋಪದೇಶವನ್ನು ಸಂಪಾದಿಸಿ, ಜ್ಞಾನಮಾರ್ಗಾವಲಂಬಿಗಳಾಗಿ, ಕರ್ಮಕಾಂಡವನ್ನು ತಮ್ಮ ರಾಜ್ಯದಿಂದ ಬಹಿಷ್ಕರಿಸಿ ಶ್ರೇಯಸ್ಸನ್ನು ಪಡೆದಿರುವರು. ಸ್ವರ್ಣನಗರಿಯಲ್ಲಿ ಅಸುರಯಜ್ಞವು ಅಗ್ನಿಯೂ ಪಶುವೂ ಧನವೂ ಇಲ್ಲದೆ ನಡೆಯುವ ಜ್ಞಾನಯಜ್ಞವಾಗಿ ಪರಿಣಮಿಸಿದೆ. ಭರದ್ವಾಜನು ಹೇಳತಕ್ಕ ಮಾನಸಮತವು ಕೃತಯುಗಕ್ಕೆ ಉಪಾದೇಯವೇ ಹೊರತು ಬೇರೆ ಯುಗಗಳಿಗೆ ಅಲ್ಲವು.

**ಇಂದ್ರ**:— ಪೂಜ್ಯರೇ ನಮ್ಮ ಉದ್ಧಾರಕ್ಕೆ ಸುಲಭವಾದ ಉಪಾಯವಾವುದೂ ಇಲ್ಲವೇ ?

**ಅಥರ್ವ**:— ಬುದ್ಧಿಬಲದ ಸಹಾಯದಿಂದ ಶತ್ರುನಾಶವನ್ನು ಮಾಡಿ ಜಯವನ್ನು ಹೊಂದಲು ಬಯಸಿದರೆ, ಕರ್ಮ ಒಳ್ಳೆಯದೆ? ಜ್ಞಾನ ಒಳ್ಳೆಯದೆ? ಮೋಕ್ಷ ಉತ್ತಮವೆ? ಎಂಬೀ ಒಗೆಯಾದ ಶುಷ್ಕವಾದವು ಹುಟ್ಟುವುದು. ಶತ್ರುನಾಶವಿಲ್ಲದೆ ಯಾವ ಇಷ್ಟಾರ್ಥವೂ ನೆರವೇರುವುದಿಲ್ಲ. ಸುಮ್ಮನೆ ನಾವು ಮಾತ್ರ ಬಲವನ್ನು ಸಂಪಾದಿಸುತ್ತಾ ಹೋದ ಮಾತ್ರಕ್ಕೆ ಜಯವು ಉಂಟಾಗಲಾರದು. ನಮ್ಮ ಬಲಕ್ಕಿಂತಲೂ ಶತ್ರುಬಲವು ಹೆಚ್ಚಿದರೆ ಆಗ ಏನು ಮಾಡುವುದು ? ಆದ್ದರಿಂದ ನಾವು ನಮ್ಮ ಬಲವನ್ನು ಹೆಚ್ಚಿಸಿಕೊಳ್ಳತಕ್ಕ ಪ್ರಯಾಸಕ್ಕೇ ಕೈ ಹಾಕದೆ, ಶತ್ರುಬಲವನ್ನು ಧ್ವಂಸಮಾಡುವ ಕಾರ್ಯವೊಂದರಲ್ಲಿ ನಮ್ಮ ಸರ್ವಪ್ರಯತ್ನವನ್ನೂ ವಿನಿಯೋಗಿಸಬೇಕು. ಬರಿಯ ದೇಹಬಲವಾಗಲಿ, ಧರ್ಮಬಲವಾಗಲಿ, ಜ್ಞಾನಬಲವಾಗಲಿ, ಈ ಕಾರ್ಯವನ್ನು ಕುಳಿತ ಕಡೆಯಲ್ಲಿ ನಿರ್ವಹಿಸಲಾರವು. ಆದರೆ ಈ ಕಾರ್ಯವು ಅಭಿಚಾರದಿಂದ ಅತಿ ಸುಲಭವಾಗಿ ನೆರವೇರುವುದು. ಅಭಿಚಾರಪ್ರಯೋಗದಿಂದ ಶತ್ರುವು ಅರೆಗಳಿಗೆಯಲ್ಲಿ ನಾಶವಾಗಿಬಿಡುವನು. ದೇವೇಂದ್ರ, ನೀನು ಈ ದ್ವಾರಾ ವಿಜಯಶಾಲಿಯಾಗು.

**ಮೇಧಾ**:— ಧರ್ಮದಿಂದ ಹುಟ್ಟತಕ್ಕ ಬಲವೂ ಜಯವೂ ಸ್ಥಿರವೇ ಹೊರತು ಮಾಟ ಮೊದಲಾದ ದುರ್ಮಾರ್ಗಗಳಿಂದ ಹುಟ್ಟತಕ್ಕ ಸಿರಿಯಲ್ಲ. ಮಾಟಮಾಡಿ ಪರರನ್ನು ಹಿಂಸಿಸುವುದು ಅತಿ ನಿಂದ್ಯಕಾರ್ಯವಾಗಿದೆ. ಈ ಮಾರ್ಗವು ಕೊಡಬಹುದಾದ ಶಕ್ತಿಯು ಪರರನ್ನು ಪೀಡಿಸಲು ಸಾಧಕವಾದೀತೇ ಹೊರತು, ಆತ್ಮಾಭಿವೃದ್ಧಿಗೆ ಎಳ್ಳಷ್ಟು ಸಹಾಯಕವಾಗತಕ್ಕ ಸ್ವಭಾವವುಳ್ಳದ್ದಾಗಿಲ್ಲ. ಮಾಟವು ಅಪೂರ್ವವಾದ ಮಾಯಾಶಕ್ತಿಯ ಸಹಾಯದಿಂದಾಗಲಿ, ಕ್ಷುದ್ರದೇವತೆಗಳ ಬಲದಿಂದಾಗಲಿ ಕೆಲಸ ಮಾಡಬೇಕು. ಮಾಯಾಶಕ್ತಿಯನ್ನು ಸಂಪಾದಿಸಬೇಕಾದರೆ, ಧರ್ಮವಾದಿಗಳು ನಿರೂಪಿಸತಕ್ಕ, ಧರ್ಮಜನ್ಯವಾದ ಅಪೂರ್ವ ಮಾಯಾಶಕ್ತಿಯನ್ನು ಸಂಗ್ರಹಿಸುವುದು ಶ್ರೇಷ್ಠವಲ್ಲವೇ? ಹಾಗೆಯೇ, ಕ್ಷುದ್ರದೇವತೆ

ಗಳ ವಶೀಕರಣಕ್ಕಿಂತಲೂ ದೇವಾಧಿದೇವನಾದ ಪರಮಾತ್ಮನನ್ನು ಭಕ್ತಿಯಿಂದ ಒಲಿಸಿಕೊಳ್ಳುವುದು ಮೇಲಲ್ಲವೇ? ಮಾಯೆಯು ಅಸುರರಿಗೆ ಸಹಜಧರ್ಮವಾಗಿದೆ. ಅಭಿಚಾರವು ಮೊದಲು ಅವರಿಂದ ಹುಟ್ಟಿ ಹರಡಿದೆ. ಅದರ ಸಹಾಯದಿಂದ ನೀವು ಅವರನ್ನು ಎಂದಿಗಾದರೂ ಸೋಲಿಸಲಾದೀತೇ?

**ನಾರದ:**— 'ಶ್ರೇಯಸ್ಸಿಗೆ ಆತ್ಮಾಭಿವೃದ್ಧಿಯೇ ಆಧಾರ' ಎಂದು ಕೆಲವರು ಹೇಳುವರು; ಪರಾವಸತಿಯೇ ಕಾರಣವೆಂದು ಇನ್ನು ಕೆಲವರು ಹೇಳುವರು. ಮೊದಲನೆಯದು ಶುದ್ಧಪಂಥವೆಂದೂ ಎರಡನೆಯದು ಹೇಯಪಂಥವೆಂದೂ ಹೇಳಲ್ಪಡುವುದು. ಧರ್ಮ, ಭಕ್ತಿ, ಜ್ಞಾನ, ರಾಜಯೋಗ ಮೊದಲಾದುವು ಶುದ್ಧಮಾರ್ಗಗಳಾಗಿವೆ ಅಭಿಚಾರವು ಅತಿ ಹೇಯಮಾರ್ಗವಾಗಿದೆ. ಇದನ್ನು........

**ಗುರು:**— ನಾರದರೇ, ನಿಮ್ಮ ಉಪನ್ಯಾಸವನ್ನು ಸಾಕುಮಾಡಿ! ರಾಜನೀತಿಯ ವಿಚಾರವಾಗಿ ದೇವೇಂದ್ರನು ಮಂತ್ರಾಲೋಚನೆ ಮಾಡಬೇಕೆಂದರೆ, ನೀವೆಲ್ಲರೂ ಅಷ್ಟು ಹೊತ್ತಿನಿಂದಲೂ ಕೆಲಸಕ್ಕೆ ಬಾರದ ಕಗ್ಗವನ್ನು ಹರಟುತ್ತಿರುವಿರಿ. ಈ ಶುಷ್ಕವೇದಾಂತದಿಂದ ದೇವತೆಗಳಿಗೆ ಎಳ್ಳಷ್ಟೂ ಲಾಭವಿಲ್ಲ. ದೇವತೆಗಳು ಆಳುವುದಕ್ಕೂ ಭೋಗಪಡುವುದಕ್ಕೂ ಹುಟ್ಟಿರುವರು. ಮೋಕ್ಷವು ಅವರ ಪಾಲಿಗೆ ಬಂದದ್ದಲ್ಲ. ಅದು ಕೆಲಸಕ್ಕೆ ಬಾರದ ಮನುಷ್ಯರಿಗೆ ಮಾತ್ರ ಉಪಾದೇಯವಾಗಿದೆ. ಅವರು ಮೋಕ್ಷಾರ್ಥಿಗಳಲ್ಲವಾದ್ದರಿಂದ ಕರ್ಮ, ಜ್ಞಾನ, ಭಕ್ತಿ, ರಾಜಯೋಗ ಇವುಗಳ ಕುಂದು ಹೆಚ್ಚಳವನ್ನು ಕುರಿತು, ನೀವು ಇದುವರೆಗೆ ನಡೆಯಿಸಿದ ಚರ್ಚೆಯು ಶುದ್ಧ ನಿರರ್ಥಕವೇ ಸರಿ. ರತಿಕಾಮವು ಒಂದು ಭೋಗವೇ ಹೊರತು ಪುರುಷಾರ್ಥವಾಗಲಾರದು. ದೇವತೆಗಳು ಧರ್ಮಕ್ಕೆ ವಿಮಾರಿದವರಾಗಿ, ಪರರ ಕೈಯಿಂದ ಧರ್ಮವನ್ನು ಮಾಡಿಸತಕ್ಕ ಅಧಿಕಾರಿಗಳಾಗಿರುವುದರಿಂದ, ತಾವು ಗೊಡ್ಡು ಮುನಿಯಂತೆ ಧರ್ಮವನ್ನು ಆಚರಿಸಬೇಕಾಗಿಲ್ಲ ಧರ್ಮದ ಬೊಬ್ಬಾಟವೂ ಭಕ್ತಿಯ ಗೋಳಾಟವೂ ಜ್ಞಾನದ ದಂಭಾಟವೂ ದೇವತೆಗಳನ್ನು ಎಂದಿಗೂ ಉದ್ಧಾರ ಮಾಡಲಾರವು. ಅಭಿಚಾರದಿಂದ ರಾಜ್ಯವಾಳಬೇಕಾದರೆ ರಾಜ್ಯದ ಸಪ್ತಾಂಗಗಳಲ್ಲಿ ರಾಜ,

ಮಂತ್ರಿ, ಸೇನೆ, ಕೋಶ, ದುರ್ಗ, ಮೊದಲಾದ ಆರು ಅಂಗಗಳನ್ನೂ ತಳ್ಳಿ ಪುರೋಹಿತನೊಬ್ಬನನ್ನೇ ಸರ್ವಾಂಗವಾಗಿ ಇಟ್ಟುಕೊಳ್ಳಬೇಕಾಗುವುದು. ಪುರೋಹಿತನು ತನ್ನ ಮಾಟದಬಲದಿಂದ ಶತ್ರುಗಳನ್ನು ನಾಶ ಮಾಡುವುದಾದರೆ, ರಾಜ್ಯಕ್ಕೆ ಸೇನೆ, ಕೋಶ, ದುರ್ಗ, ಮಂತ್ರಿ, ರಾಜ ಮೊದಲಾದ ಉಪಪತ್ತಿ ಏನೂ ಬೇಕಾಗುವುದಿಲ್ಲ.

**ಇಂದ್ರ**:— ಗುರುಗಳೇ ಹಾಗಾದರೆ ನಮಗೆ ನಿಮ್ಮ ಉಪದೇಶ ವೇನು ?

**ಗುರು**:— ಧರ್ಮ, ಕಾಮ, ಮೋಕ್ಷಗಳ ಹಂಬಲವನ್ನು ಬಿಟ್ಟು, ಅರ್ಥವನ್ನು ಅನನ್ಯಪುರುಷಾರ್ಥವಾಗಿ ಪರಿಗ್ರಹಿಸಬೇಕು. ಕರ್ಮ, ಜ್ಞಾನ, ಭಕ್ತಿ, ಯೋಗಗಳ ಗೋಜಿಗೆ ಹೋಗದೆ ಸ್ವಪ್ರಯತ್ನವನ್ನೇ ನಂಬಿ ಕೆಲಸಮಾಡಬೇಕು. ಅಪೂರ್ವ, ಅದೃಷ್ಟ, ಮಂತ್ರ, ಮಾಟ, ಮಾಯೆ, ಭಗವದನುಗ್ರಹ ಮೊದಲಾದ ಅಪ್ರಾಕೃತ ಸಿದ್ಧಿಗಳ ಪವ್ಯಾಸಕ್ಕೆ ಕೈಹಾಕದೆ, ದೃಷ್ಟಬುದ್ಧಿಬಲವನ್ನು ಸಂಪೂರ್ಣವಾಗಿ ಆಶ್ರಯಿಸಬೇಕು. ಆನ್ವೀಕ್ಷಕೀ, ತ್ರಯೀಗಳನ್ನು ನಿರಾಕರಿಸಿ, ವಾರ್ತಾ ದಂಡನೀತಿಗಳನ್ನು ಮಾತ್ರ ಇಟ್ಟುಕೊಳ್ಳಬೇಕು.

**ಇಂದ್ರ**:— ಅರ್ಥ, ಸ್ವಪ್ರಯತ್ನ, ದೃಷ್ಟಬುದ್ಧಿಬಲ, ವಾರ್ತಾ, ದಂಡನೀತಿ ಇವುಗಳನ್ನು ಮಾತ್ರ ಆಶ್ರಯಿಸಿ, ಶ್ರೇಯಸ್ಸನ್ನು ಸಾಧಿಸುವುದು ಹೇಗೆ ?

**ಗುರು**:— ಧರ್ಮ, ಕಾಮ, ಮೋಕ್ಷ ಪುರುಷಾರ್ಥಗಳು ಆತ್ಮವನ್ನು ದೇಹದಿಂದಲೂ ವ್ಯಕ್ತಿಯನ್ನು ಸಮಾಜದಿಂದಲೂ ಭಿನ್ನಪಡಿಸಿ, ಆತ್ಮ ಮತ್ತು ವ್ಯಕ್ತಿಹಿತವನ್ನು ಮುಖ್ಯವಾಗಿ ಪುರಸ್ಕರಿಸುವುವು. ಅರ್ಥ ಪುರುಷಾರ್ಥವು ದೇಹಾತ್ಮಗಳಿಗೆ ಸಮನ್ವಯವನ್ನುಂಟುಮಾಡಿ, ವ್ಯಕ್ತಿಯನ್ನು ಸಮಾಜಕ್ಕೆ ಅಂಗವಾಗಿ ಮಾಡಿ, ಒಟ್ಟು ಸಮಷ್ಟಿಯ ಹಿತವನ್ನು ಮುಖ್ಯವಾಗಿ ಪುರಸ್ಕರಿಸುವುದು. ಅರ್ಥಪುರುಷಾರ್ಥವು, ಸಮಾಜಹಿತವನ್ನು ಸಾಧಿಸುವುದರ ದ್ವಾರಾ ವ್ಯಕ್ತಿಕಲ್ಯಾಣವನ್ನೂ ವ್ಯಕ್ತಿಯ ದೇಹಾತ್ಮಗಳೆರಡರ ಹಿತವನ್ನೂ ಕಲ್ಪಿಸುವುದು.

**ಮೇಧಾ:—** ಈ ಸಮಾಜಾಭ್ಯುದಯವನ್ನು ಕರ್ಮ, ಜ್ಞಾನ, ಭಕ್ತಿ, ಯೋಗ, ಮಂತ್ರ, ತಪಸ್ಸು ಮೊದಲಾದ ಉಪಾಯಗಳಿಂದ ಸಾಧಿಸಲಾಗುವುದಿಲ್ಲವೋ ?

**ಗುರು:—** ಖಂಡಿತ ಆಗುವುದಿಲ್ಲ. ಈ ಉಪಾಯಗಳು ಅನ್ಯ ಪುರುಷಾರ್ಥಗಳನ್ನು ಉಪಲಕ್ಷಿಸಿ, ದೇಹಾತ್ಮಗಳಿಗೂ ವ್ಯಕ್ತಿಸಮಾಜಗಳಿಗೂ ದ್ವಂದ್ವವನ್ನು ಹುಟ್ಟಿಸುವುವು. ಅಂತಹ ಸಂದರ್ಭದಲ್ಲಿ ಕೇವ ವ್ಯಕ್ತಿಗಳು "ದಿವ್ಯ" ವಾಗಿ ಪ್ರವರ್ಧಮಾನರಾದರೂ ಸಮಾಜವು ದಿವ್ಯವಾಗಿ ಅಭಿವೃದ್ಧಿ ಪಡೆಯಲಾರದು. ವ್ಯಕ್ತಿಗಳಿಗೂ ಸಮಾಜಕ್ಕೂ ಮಧ್ಯೆ ದೇವರು, ಪರಲೋಕ, ಅಪೂರ್ವ, ಅದೃಷ್ಟ, ಮಾಯೆ ಮೊದಲಾದ ಯಾವುದೂ ಇರಕೂಡದು. ವ್ಯಕ್ತಿಯು ತನ್ನ ತನುಮನಧನವನ್ನೆಲ್ಲಾ ಸಮಾಜಸೇವೆಗೆ ಸಮರ್ಪಣೆ ಮಾಡಿ ಸ್ವಾವಲಂಬನೆ, ಸ್ವಪ್ರಯತ್ನ, ಬುದ್ಧಿವ್ಯವಸಾಯ, ಯುಕ್ತಿವಿಮರ್ಶೆ, ಪ್ರಕೃತಿವಿಜ್ಞಾನ ಇವುಗಳ ಮುಖಾಂತರ ಕೆಲಸಮಾಡಬೇಕು. ಅರ್ಥಪುರುಷಾರ್ಥವು ಸಿದ್ಧಿಸಬೇಕಾದರೆ ಸಮಾಜಾಭ್ಯುದಯವೂ ವಿಜ್ಞಾನಾಶ್ರಯವೂ ಉಪಾದೇಯವಾಗಬೇಕು.

**ಇಂದ್ರ:—** ಆದರೆ ಅಸುರರು ತಪಸ್ಸಿನಿಂದಲೂ ವೇದಾಂತಜ್ಞಾನದಿಂದಲೂ ಈಗ ಲೋಕಾಧಿಪತ್ಯವನ್ನು ಪಡೆದು ಮೆರೆಯುತ್ತಿರುವರಲ್ಲವೇ? ಬ್ರಹ್ಮನ ವರದಿಂದ ಗರ್ವಿತರಾದ ಇವರನ್ನು ಪ್ರಾಕೃತವ್ಯಕ್ತಿಗಳ ಪಾಮರ ಪ್ರಯತ್ನದಿಂದ ಸೋಲಿಸಲಾದೀತೇ ?

**ಗುರು:—** ಅಸುರ ರಾಜ್ಯದಲ್ಲಿ ವೇದಾಂತಜ್ಞಾನವು ಏಕದೇಶವಾಗಿ ಸ್ವರ್ಣನಗರಿಯಲ್ಲಿ ಮಾತ್ರ ಇರುತ್ತಿದೆ. ಇದು ಅಸುರಭಾಗ್ಯದ ಒಂದು ಫಲಭೋಗ ಸಾಮಗ್ರಿಯಾಗಿರುವುದೇ ಹೊರತು, ಕಾರಣಸಾಮಗ್ರಿಯಾಗಿಲ್ಲ. ಸಮಾಜದಲ್ಲಿ ಕೆಲವುಮಂದಿ ಇದನ್ನು ಅನುಭೋಗಿಸಬೇಕಾದರೆ, ಬಹುಮಂದಿ ಕ್ಷಾತ್ರ ವೈಶ್ಯ ಸೇವಾವೃತ್ತಿಗಳನ್ನು ನಿರ್ವಾಹ ಮಾಡಬೇಕಾಗಿದೆ. ಅಸುರಸಮಾಜದಲ್ಲಿ, ರಜತ ಲೋಹನಗರಗಳವರು ಕ್ಷಾತ್ರ ವೈಶ್ಯವೃತ್ತಿಗಳನ್ನು ದಂಡನೀತಿ, ವಾರ್ತಾಶಾಸ್ತ್ರಗಳಿಗನುಸಾರವಾಗಿ ಅವಲಂಬಿಸಿ, ಮನುಷ್ಯಲೋಕದವರನ್ನು ದಾಸರನ್ನಾಗಿ ಮಾಡಿಕೊಂಡು, ಜೀತಕ್ಕೆ ಹಾಕಿ, ಅನಂತಭೋಗಲೋಲುಪರಾಗಿ ಮೆರೆಯುತ್ತಿರುವರು.

ಅಸುರರು ಶುಕ್ರಾಚಾರ್ಯನ ನೀತಿಬಲದಿಂದ, ಜ್ಞಾನಕ್ಕಿಂತಲೂ ವಿಜ್ಞಾನ ವನ್ನು ಅಧಿಕವಾಗಿ ಆಶ್ರಯಿಸಿ ಪ್ರವರ್ಧಮಾನರಾಗಿರುವರು. ಅಸು ರಾಭ್ಯುದಯಕ್ಕೆ ಬ್ರಹ್ಮಪರಕ್ಕಿಂತಲೂ ಶುಕ್ರನೀತಿಯು ಮುಖ್ಯಕಾರಣ ವಾಗಿದೆ.

**ಇಂದ್ರ**:— ಈ ಶುಕ್ರನೀತಿಯ ರಹಸ್ಯವೇನು ?

**ಗುರು**:— ಶುಕ್ರನು ಅರ್ಥವನ್ನೇ ಮುಖ್ಯಪುರುಷಾರ್ಥವನ್ನಾಗಿ ಏರ್ಪಡಿಸಿ, ತತ್ವಶಾಸ್ತ್ರವನ್ನೂ ವೇದಶಾಸ್ತ್ರವನ್ನೂ ನಿರಾಕರಿಸಿ, ರಾಜ-ನೀತಿಶಾಸ್ತ್ರವನ್ನೇ ಅನನ್ಯವಾಗಿ ಪರಿಗ್ರಹಿಸಿ, ಜ್ಞಾನ-ಕರ್ಮ-ಭಕ್ತಿ-ಯೋಗಗಳೆಲ್ಲವನ್ನೂ ವಿಜ್ಞಾನಕ್ಕೆ ಅಧೀನಪಡಿಸಿ, ವಿಜ್ಞಾನದ ಬಲದಿಂದ ವಿಶ್ವದ ಅನಂತಶಕ್ತಿಗಳನ್ನೂ ವಶಪಡಿಸಿಕೊಂಡು, ಸಕಲ ಕೆಲಸವನ್ನೂ ಯಂತ್ರಗಳ ಮೂಲಕ ಮಾಡಿಸುತ್ತ, ಅಸುರಸಮಾಜವನ್ನು ಅತ್ಯುತ್ಕೃಷ್ಟವಾಗಿ ವ್ಯವಸ್ಥಾಪನೆ ಮಾಡಿ, ದುರ್ಭೇದ್ಯವಾದ ಮೂರು ಜನ ಯಂತ್ರದುರ್ಗಗಳನ್ನು ಕಟ್ಟಿ, ಮೂರು ಲೋಕಗಳನ್ನೂ ಆಳುತ್ತಿರುವನು. ಈತನ ರಾಜನೀತಿಯು ಅತಿ ತೀಕ್ಷ್ಣವೂ ಭಯಂಕರವೂ ಆಗಿದೆ; ರಾಜ್ಯಭಾರವು ಬಲು ದಕ್ಷವಾಗಿಯೂ ಬಿಗಿಯಾಗಿಯೂ ಇದೆ; ಪ್ರಜೆಗಳ ರಾಜಕೀಯ ಪ್ರಜ್ಞೆಯು ಅನ್ಯಾದೃಶವಾಗಿದೆ. ರಾಷ್ಟ್ರದ ಅಭ್ಯುದಯಕ್ಕಾಗಿ ಪ್ರಜೆಗಳು ಏನು ಬೇಕಾದರೂ ಮಾಡುವರು. ಬೇಕಾದರೆ ತಾಯಂದಿರು ಮಕ್ಕಳನ್ನು ಕೈಯ್ಯಾರೆ ವಧಿಸುವರು; ಸತಿಯರು ತಮ್ಮ ಪಾತಿವ್ರತ್ಯ ವನ್ನು ತ್ಯಜಿಸುವರು; ಮನುಷ್ಯರು ಘೋರಪಾಪಗಳನ್ನು ಮಾಡು ವರು; ಮಕ್ಕಳು ತಂದೆತಾಯಿಗಳನ್ನಾದರೂ ಕೊಲ್ಲುವರು; ಧರ್ಮ ನಿಷ್ಠರು ನಾಯಮಾಂಸವನ್ನಾದರೂ ತಿನ್ನುವರು. ಪ್ರಜೆಗಳು ತಂತಮ್ಮ ವೈಯಕ್ತಿಕವಾದ ಸ್ವಂತ ಕೆಲಸವನ್ನು ಸಹ, ರಾಷ್ಟ್ರಹಿತವನ್ನು ಮೊದಲು ಯೋಚಿಸಿ ಮಾಡುತ್ತಿರುವರು. ರಾಜಾಜ್ಞೆಯನ್ನು ಮೀರತಕ್ಕವರಿಗೆ ಶುಕ್ರನು ಎಳ್ಳಷ್ಟೂ ಮರುಕ ತೋರಿಸದೆ ಚಿತ್ರಹಿಂಸೆ ಮಾಡಿಸುವನು; ರಾಜ್ಯದ ಹಿತಕ್ಕಾಗಿ ಅಧರ್ಮವನ್ನಾದರೂ ಆಚರಿಸುವನು. ಇವನ ರಾಜ ನೀತಿಯು ಧರ್ಮಾಧರ್ಮದ ಕಟ್ಟುಪಾಡಿಗೆ ಮೀರಿದ್ದಾಗಿರುವುದು; ಕೊಲೆ, ಮೋಸ, ಅನೃತ, ಹಿಂಸೆ, ಕಾಪಟ್ಯ, ಕಳ್ಳತನ, ಸ್ತ್ರೀಪ್ರಯೋಗ ಮೊದ ಲಾದುವುಗಳನ್ನು ಇದು ಬಹಿರಂಗವಾಗಿ ಉಪಯೋಗಿಸುತ್ತಿದೆ.

**ಮೇಧಾ:—** ಮೂರು ಲೋಕಕ್ಕೂ ಧರ್ಮಾಧಿಕಾರಿಯಾಗಿ ಗೊತ್ತು ಮಾಡಲ್ಪಟ್ಟಿರುವ ದೇವೇಂದ್ರನು, ಬುದ್ಧಿಪೂರ್ವಕ ಅಧರ್ಮಾಧಿಕಾರಿಯಾಗಬೇಕೋ ?

**ಗುರು:—** ಧರ್ಮಜಾಡ್ಯವು ನಿಮ್ಮ ವಿವೇಕವನ್ನು ಹಾಳು ಮಾಡಿದೆ ಧರ್ಮಕ್ಕೆ ಇಂದ್ರನು ಅಧಿಕಾರಿಯಾದರೆ ಆತನು ವಿಧಿಸಿದ್ದು ಧರ್ಮವಾಗಬೇಕು. ಈಗ 'ಅಸಾಧು' ಎಂದು ಸಂಕೇತವಾಗಿರುವುದನ್ನು ಇಂದ್ರನು 'ಸಾಧು' ಎಂದು ಸಂಕೇತ ಮಾಡಲು ಅನಧಿಕಾರಿಯೇ ? ಈ ಧರ್ಮಾಧರ್ಮವ್ಯವಸ್ಥೆಯು, ಮನುಷ್ಯಲೋಕದವರನ್ನು ದೇವತೆಗಳು ಸ್ಥಿರವಾಗಿ ಆಳುತ್ತಾ ಬರುವುದಕ್ಕಾಗಿ ಕಲ್ಪಿತವಾಗಿರುವ ಸಂವಿಧಾನ ಮಾತ್ರವಾಗಿದೆ ಉದಾಹರಣೆಗಾಗಿ, 'ಯಾಗ' ಎಂಬುದು ದೇವತೆಗಳಿಗೆ ಮನುಷ್ಯರು ಕಪ್ಪವನ್ನು ಸಲ್ಲಿಸತಕ್ಕ ಉಪಾಯವಾಗಿದೆ. ಇದು ಮನುಷ್ಯರ ಭಾಗಕ್ಕೆ ಧರ್ಮಸಾಧಕವಾಗಿಯೂ ದೇವತೆಗಳ ಭಾಗಕ್ಕೆ ಅರ್ಥಸಾಧಕವಾಗಿಯೂ ಇದೆ. ತಮಗೆ ಅರ್ಥಸಾಧಕವಾಗಿರುವ ಮಾರ್ಗಗಳನ್ನು ದೇವತೆಗಳು ಮನುಷ್ಯರಿಗೆ ಧರ್ಮವೆಂದು ವಿಧಿಸಿರುವರು. ಈ ಮಾರ್ಗಗಳನ್ನು ಕಾಲಾನುಗುಣವಾಗಿ ಮಾರ್ಪಡಿಸುವುದಕ್ಕೆ ಅವರು ಅಧಿಕಾರಿಗಳಲ್ಲವೇ ? ಇಷ್ಟಕ್ಕೂ ಈಗ ದೇವತೆಗಳಿಗೆ ಭೂಲೋಕಾಧಿಪತ್ಯವು ತಪ್ಪಿಹೋಗಿರುವುದರಿಂದ, ಧರ್ಮಾಧರ್ಮದ ಚಿಂತೆಯು ಅವರಿಗೆ ಇರಲು ಆಧಾರವೇ ಇಲ್ಲ.

**ಇಂದ್ರ:—** ಗುರುಗಳೇ, ನೀವು ನಮ್ಮ ಸ್ಥಿತಿಯಲ್ಲಿ ಒಂದು ವಿಚಾರವನ್ನು ಗಮನಿಸಿದಂತೆ ತೋರುವುದಿಲ್ಲ. ಅಸುರರು ನಮ್ಮ ಅನ್ನ ಸಾಧನಗಳಾದ ಕಲ್ಪವೃಕ್ಷಾದಿ ಯಂತ್ರಗಳನ್ನು ಅಪಹರಿಸಿ, ಭೂಲೋಕವನ್ನು ತಮ್ಮ ವಶಪಡಿಸಿಕೊಂಡು,ಅದರ ಸಾರವನ್ನು ತಾವು ಹೀರುತ್ತಿರುವರು. ಇದರಿಂದ ನಮ್ಮ ದೇವಕುಲಕ್ಕೇ ತೊಂದರೆಯಾಗಿದೆ. ಮೊದಲು ಈ ಕಷ್ಟವು ಪರಿಹಾರವಾದದಲ್ಲವೇ ನೀವು ಹೇಳಿದ ರೀತಿ ರಾಜ್ಯ ಪರಿಷ್ಕರಣ ಕಾರ್ಯದಲ್ಲಿ ನಾವುಕೈಹಾಕಬಹುದು ?

**ಗುರು:—** ದೇವರಾಜ, ನಿನ್ನ ಮಾತು ನಿಜ. ನೀವು ಆಲಸಿಗರಾಗಿದ್ದಾಗ ಅಸುರರು ಬಲವನ್ನು ಸಂಪಾದಿಸಿ, ಮೂರು ಲೋಕದ ಐಶ್ವರ್ಯ

ವನ್ನೂ ಧನಮೂಲಗಳನ್ನೂ ವಶಪಡಿಸಿಕೊಂಡು, ನರಲೋಕವನ್ನು ದಾಸರ ಲೋಕವನ್ನಾಗಿ ಮಾಡಿ, ಸುಸುಷ್ಮರ ಬಿಟ್ಟಿಯ ಜೀತದಿಂದ ಮಹಾಸಂಪತ್ಕರವಾಗಿ ಜೀವಿಸುತ್ತಿರುವರು. ಆದ್ದರಿಂದಲೇ ಶುಕ್ರನು ಅರ್ಥಪುರುಷಾರ್ಥಸಾಧನೆಗೆ ದಂಡನೀತಿಮಾತ್ರ ಸಾಕೆಂದು ಅಭಿಪ್ರಾಯಪಟ್ಟಿರುವನು. ನೀವು ಇದರ ಜತೆಗೆ 'ವಾರ್ತಾ' ಎಂದರೆ ವ್ಯಾಪಾರದ ಕೈಗಾರಿಕೆ ಮೊದಲಾದ ಧನಕಲ್ಪನೆಯ ಮಾರ್ಗಗಳನ್ನು ಅವಲಂಬಿಸದಿದ್ದರೆ ನಿರ್ವಾಹವಿಲ್ಲ. ನನ್ನ ಮತವು, ವಾರ್ತಾ ದಂಡನೀತಿಗಳೆರಡನ್ನೂ ಸಮವಾಗಿ ಪುರಸ್ಕರಿಸುವುದು.

**ಅಗಸ್ತ್ಯ:**— ಅಸುರರು ವಾರ್ತಾನೀತಿಯನ್ನು ನಿರಾಕರಿಸಿಲ್ಲ. ಲೋಹನಗರಿಯು ಈಗ ಮೂರು ಲೋಕದ ವ್ಯಾಪಾರ ಕೈಗಾರಿಕೆಗಳಿಗೂ ಕೇಂದ್ರಸ್ಥಾನವಾಗಿದೆ.

**ಗುರು:**— ಶುಕ್ರಮತವು ವಾರ್ತಾನೀತಿಯನ್ನು ದಂಡನೀತಿಗೆ ಅಧೀನಪಡಿಸುವುದೇ ಹೊರತು ನಿರಾಕರಿಸುವುದಿಲ್ಲ. ನನ್ನ ಮತವು ಎರಡನ್ನೂ ಸಮಾನವೆಂದು ಭಾವಿಸುವುದಲ್ಲದೆ, ಸಂದರ್ಭಾನುಸಾರ ದಂಡನೀತಿಯನ್ನು ವಾರ್ತಾನೀತಿಗೆ ಅಧೀನ ಪಡಿಸುವುದು. ಯಾವ ರಾಜ್ಯದಲ್ಲಿ ರಾಜಕೀಯವ್ಯವಸ್ಥೆಯು ಆರ್ಥಿಕ ವ್ಯವಸ್ಥೆಯನ್ನು ಅನುವರ್ತಿಸಿ ಸಾಮರಸ್ಯವಾಗಿ ಇರುವುದೋ ಆ ರಾಜ್ಯಕ್ಕೆ ಎಂದಿಗೂ ಚ್ಯುತಿಯು ಇರದು. ನನ್ನ ಮತಾನುಸಾರವಾಗಿ ಅಸುರರಾಜ್ಯದ ಪ್ರಭುವು ಲೋಹನಗರಿಯಲ್ಲಿ ಆಳಬೇಕೇ ಹೊರತು ಸ್ವರ್ಣನಗರಿಯಲ್ಲಿ ಅಲ್ಲ. ಅಸುರಸಾಮ್ರಾಜ್ಯವ್ಯವಸ್ಥೆಯಲ್ಲಿ ಹುಟ್ಟಿರುವ ಈ ದೋಷವು, ಕಾಲಾನುಕಾಲದಲ್ಲಿ ಅವರ ಪತನಕ್ಕೆ ಕಾರಣವಾಗದೆ ಇರದು.

**ವಾತ್ಸ್ಯ:**— ದೇವತೆಗಳು ವಿಜ್ಞಾನದ ಆಸರೆಯಿಂದ ವ್ಯಾಪಾರ ಕೈಗಾರಿಕೆಗಳನ್ನು ಕೈಹಿಡಿದು, ರಾಜಬಲವನ್ನೂ ಸಮಾಜಬಲವನ್ನೂ ಹೆಚ್ಚಿಸಿಕೊಂಡರೆ ಸ್ವರಾಜ್ಯವನ್ನು ಸಾಧಿಸುವರು—ಎಂಬುದು ನಿಮ್ಮ ಅಭಿಮತವಲ್ಲವೇ?

**ಗುರು:**— ಅಹುದು.

**ನಾರದ:**— ದೇವಪುರೋಹಿತರೇ, ನಿಮ್ಮ ಮಂಕುತನಕ್ಕೆ ಏನೆನ್ನ

ಬೇಕು? ಅನಾದಿಕಾಲದಿಂದಲೂ ಪರಾಶ್ರಿತರಾಗಿ, ಸೋಮಾರಿಗಳಾಗಿ, ಕಾಮಾಂಧರಾಗಿ, ಮೂಢರಾಗಿ ಕುಳಿತಿರುವ ದೇವತೆಗಳನ್ನು ಈಗ ಗಾಣಕ್ಕೆ ಕಟ್ಟಿದರೆ ಅವರು ಎಣ್ಣೆ ಹಿಂಡಬಲ್ಲರೇ? ಇದು ನಡೆಯುವ ಮಾತೇ? ಅಸುರರು ಅಪರಿಮಿತ ಬಲಸಂಪನ್ನರಾಗಿ, ಅತ್ಯದ್ಭುತ ಯಂತ್ರೋಪಕರಣಸಮೇತರಾಗಿ, ದುರ್ಭೇದ್ಯ ಸಮಾಜವ್ಯವಸ್ಥೆಯಿಂದ ವಿರಾಜಿಸುತ್ತಿರುವರು. ದೇವತೆಗಳು ಅಸುರರಿಗೆ ಮಿಗಿಲಾದ ಸಮಾಜವ್ಯವಸ್ಥೆಯನ್ನೂ ಯಂತ್ರಸಾಧನೆಗಳನ್ನೂ ಪಡೆದಲ್ಲದೆ, ಅವರನ್ನು ಸೋಲಿಸಿ ಸ್ವರಾಜ್ಯವನ್ನು ಪಡೆಯಲಾರರು. ಇದು ದೇವತೆಗಳ ಸ್ವಪ್ರಯತ್ನದಿಂದ ನಡೆಯುವ ಮಾತೇ? ಮೊದಲಿನಿಂದಲೂ ಏಕೈಕವಾಗಿಯೇ ಜೀವಿಸುತ್ತಾ ಬಂದಿರುವ ದೇವತೆಗಳು, ಹಠಾತ್ತಾಗಿ ಸಮಾಜಗುಣವನ್ನು ಕಲಿತು ಬಿಡಲಾರರು. ವಿದ್ಯಾಗಂಧಶೂನ್ಯರಾಗಿರುವ ಅವರು, ನೆನಸಿದ ಗಳಿಗೆಯಲ್ಲಿ ವಿಜ್ಞಾನವನ್ನು ವಶಪಡಿಸಿಕೊಳ್ಳಲಾರರು.

**ಇಂದ್ರ**:— ನಾರದರ ಅಭಿಪ್ರಾಯವನ್ನು ನಾನು ಅನುಮೋದಿಸುತ್ತೇನೆ. ನಮ್ಮ ಈಗಿನ ಸ್ಥಿತಿಯಲ್ಲಿ ನಮ್ಮ ಗುರುಗಳ ನೀತಿಯು ದೇವತೆಗಳನ್ನು ಉದ್ಧಾರಮಾಡಲಾರದು. ಈಗ ನಾವು ಅಸುರರಿಗೆ ಅಧೀನರಾಗಿ ಬಾಳುತ್ತಿದ್ದೇವೆಂಬುದನ್ನು ಅವರು ಮರೆತಂತಿದೆ. ಒಂದುಪಕ್ಷಕ್ಕೆ ದೇವತೆಗಳು ತಮ್ಮ ಅನಾದಿಕಾಲಾನುವರ್ತಿಯಾದ ಜಡಸ್ವಭಾವವನ್ನು ಮಾರ್ಪಡಿಸಿಕೊಂಡು, ಜಂಗಮಪ್ರಕೃತಿಯುಳ್ಳವರಾದರೆಂದು ಇಟ್ಟುಕೊಳ್ಳೋಣ. ಗುರುಗಳು ಹೇಳುವಂತೆ ಇವರು ಶತ್ರುನಿರಸನಾರ್ಥವಾಗಿ ತಮ್ಮ ರಾಜಬಲ, ಸಮಾಜಬಲ, ಅರ್ಥಬಲಗಳನ್ನು ಬಹಿರಂಗವಾಗಿ ಹೆಚ್ಚಿಸಿಕೊಳ್ಳುವುದನ್ನು ಅಧಿರಾಜರಾದ ಅಸುರರು ಸಹಿಸುವರೇ? ಅವರು ಅದಕ್ಕೆ ಅವಕಾಶಕೊಡದೆ ಅಡ್ಡಿಪಡಿಸಿದರೆ ನಮ್ಮ ಗತಿ ಏನು?

**ಗುರು**:— ಅಂತಹ ಅಡ್ಡಿಯನ್ನು ನಿವಾರಿಸಿ ಅಧಿಕ ಪ್ರಯತ್ನವನ್ನು ಮಾಡಿರಿ.

**ಇಂದ್ರ**:— ಅದು ನಮ್ಮ ಕೈಯಲ್ಲಿ ಆಗದ ಮಾತು.

**ಅಗಸ್ತ್ಯ**:— ಗುರುಮತದಲ್ಲಿ ಮತ್ತೂ ದೋಷಗಳಿರುವುವು. ಲೋಕದ ವ್ಯಾಪಾರವನ್ನೆಲ್ಲಾ ಅಸುರರು ವಶಪಡಿಸಿಕೊಂಡು ಕುಳಿತು

ಇರುವಾಗ,ದೇವತೆಗಳು ಅವರನ್ನು ಸಡಲಿಸುವುದಕ್ಕೆ ಮೊದಲು ಯಾರೊಡನೆ ವ್ಯಾಪಾರ ಮಾಡುವುದು? ಸಕಲರೂ ವ್ಯಾಪಾರ ಕೈಗಾರಿಕೆಗಳನ್ನು ಅವಲಂಬಿಸಿದರೆ, ಕೈಗಾರಿಕೆಯ ಬೆಳೆಗಳನ್ನೂ ಆಹಾರವನ್ನೂ ಬೆಳೆಯುತಕ್ಕವರು ಯಾರು? ವಾರ್ತಾಕರ್ಮವು ಬೇಟೆ,ಪಶುಪಾಲನ, ಕೃಷಿ, ವಾಣಿಜ್ಯ, ಕೈಗಾರಿಕೆ ಎಂಬ ಹಲವು ಸೋಪಾನಗಳುಳ್ಳದ್ದಾಗಿದೆ. ಪ್ರಕೃತಿಯಲ್ಲಿ ತಾನಾಗಿ ದೊರೆಯುತಕ್ಕ ಮೃಗ, ಮಾಸು,ಹಣ್ಣು ಹಂಪಲು, ಕಂದಮೂಲಗಳನ್ನು ಸಂಗ್ರಹಿಸುವುದು, 'ಬೇಟೆ' ಎನ್ನಿಸುವುದು. ಸ್ವಪ್ರಯತ್ನದಿಂದ ಆಹಾರವನ್ನು ಕಲ್ಪಿಸುವ ಕಾರ್ಯವು ಪಾಶುಪಾಲ್ಯ ಮತ್ತು ಕೃಷಿರೂಪವಾಗಿದೆ. ಆಹಾರವನ್ನೂ ಕೈಗಾರಿಕೆಯ ಬೆಳೆಗಳನ್ನೂ ಮತ್ತೊಬ್ಬರು ಸಮೃದ್ಧಿಯಾಗಿ ಒದಗಿಸದಿದ್ದರೆ, ವ್ಯಾಪಾರ ಕೈಗಾರಿಕೆಗಳು ನಡೆಯಲಾರವು. ಈ ಕಾರ್ಯಕ್ಕೆ ಅಸುರರು ನರಜಾತಿಯನ್ನು ಹಾಕಿ, ತಾವು ವ್ಯಾಪಾರ ಕೈಗಾರಿಕೆಗಳನ್ನು ಮಾತ್ರ ಇಟ್ಟುಕೊಂಡಿರುವರು. ಅನ್ನಾಭಾವದಿಂದ ಗಾಸಿಪಡುತ್ತಿರುವ ದೇವತೆಗಳು ವಾರ್ತಾಕರ್ಮಕ್ಕೆ ಕೈ ಹಾಕಿದರೆಂದರೆ, ವ್ಯಾಪಾರ ಕೈಗಾರಿಕೆಗಳಿಗಿಂತಲೂ ಪಶುಪಾಲನ ಕೃಷಿ ವೃತ್ತಿಗಳನ್ನು ಮುಖ್ಯವಾಗಿ ಅವಲಂಬಿಸದಿದ್ದರೆ ನಿರ್ವಾಹವಿಲ್ಲ. ಆದರೆ ಈ ವೃತ್ತಿಗಳು ರಾಜಕೀಯದೌರ್ಬಲ್ಯವನ್ನು ವ್ಯಾಪಾರ ಕೈಗಾರಿಕೆಗಳಂತೆ ಹೋಗಲಾಡಿಸಲಾರವು.

**ಇಂದ್ರ:**— ಪೂಜ್ಯರೇ, ಹಾಗಾದರೆ ನಮ್ಮ ಉದ್ಧಾರಕ್ಕೆ ಉಪಾಯುವೇ ಇಲ್ಲವೇ?

**ನಾರದ:**— ದೇವೇಂದ್ರ, ನಿನ್ನ ಹಿಂದಣ ಆಪತ್ಸಂಧಿಗಳಲ್ಲಿ ನೀನು ಏನು ಮಾಡುತ್ತಿದ್ದೆ? ಈಗನಂತೆ ಕೆಲಸಕ್ಕೆ ಬಾರದ ಚರ್ಚೆಮಾಡುತ್ತಿದ್ದೆಯೋ?

**ಇಂದ್ರ:**— ಹಿಂದೆ ಯಾವಾಗಲೂ ನಾನು ಈ ರೀತಿ ಮಂತ್ರಾಲೋಚನೆಗೆ ಕುಳಿತಿರಲಿಲ್ಲ. ನಮ್ಮ ಗುರುಗಳ ಅಪ್ಪಣೆಯಂತೆ ಈಗ ನಿಮ್ಮೆಲ್ಲರ ಹಿತವಾದವನ್ನು ಕೇಳಿದೆನು. ನನ್ನ ಉದ್ದೇಶವು ನೆರವೇರಲಿಲ್ಲ.

**ಮೇಧಾ:**— ಹಿಂದೆ ಏನು ಮಾಡುತ್ತಿದ್ದೆ?

**ಇಂದ್ರ:**— ಆಪತ್ತೊದಗಿತೆಂದರೆ, ತ್ರಿಮೂರ್ತಿಗಳನ್ನು ಮೊರೆ ಹೊಗುತ್ತಿದ್ದೆ.

**ನಾರದ:**— ಈಗಲೂ ಹಾಗೆಯೆ ಮಾಡಬಾರದೇಕೆ?

**ಇಂದ್ರ:**— ಈ ಯುಗದಲ್ಲಿ ಆಪತ್ತನ್ನು ನಾವು ನಮ್ಮ ಪ್ರಯತ್ನದಿಂದ ಪರಿಹರಿಸಿಕೊಳ್ಳಬೇಕೆಂದೂ, ತಾನು ಹಿಂದಿನಂತೆ ಸಾಕ್ಷಾತ್ತಾಗಿ ನಮ್ಮ ವಿಪತ್ತನ್ನು ನಾಶಮಾಡಲು ಪ್ರವರ್ತಿಸುವುದಿಲ್ಲವೆಂದೂ, ನಾವು ತ್ರಿಕರಣಶುದ್ಧಿಯಿಂದ ಪ್ರಯತ್ನಪಡುವುದಾದರೆ, ತಾನು ನಮ್ಮ ಪ್ರಯತ್ನಕ್ಕೆ ಪರೋಕ್ಷವಾಗಿ ಬೆಂಬಲಕೊಟ್ಟು, ವಿಪತ್ತಿನ ಶಕ್ತಿಯನ್ನು ತಗ್ಗಿಸುವಷ್ಟು ಸಹಾಯವನ್ನು ಮಾತ್ರ ಮಾಡುವುದಾಗಿಯೂ ಶ್ರೀಹರಿಯು ನನಗೆ ತಿಳಿಸಿ ಈಗ ತಟಸ್ಥನಾಗಿರುವನು. ಬ್ರಹ್ಮನನ್ನು ಅಸುರರು ತಮ್ಮ ವಶಪಡಿಸಿಕೊಂಡಿರುವರು. ಶಿವನು ಸ್ವಭಾವತಃ ಅಸುರಪಕ್ಷಾಭಿಮಾನಿಯಾಗಿರುವನು. ಈ ಕಾರಣದಿಂದ ನಾನು ಈಗ ಹೊಸಮಾರ್ಗವನ್ನು ಹುಡುಕುವ ಪ್ರವೃತ್ತಿಯುಳ್ಳವನಾದೆನು.

**ನಾರದ:**— ನಿನಗೆ ಹೊಸಮಾರ್ಗವು ಗೋಚರಿಸಿತೋ?

**ಇಂದ್ರ:**— ಇಲ್ಲ, ಹಿಂದಿನಂತೆಯೇ ಈಗಲೂ ತ್ರಿಮೂರ್ತಿಗಳ ಸಹಾಯವೊಂದೇ ನಮ್ಮ ಉದ್ಧಾರಕ್ಕೆ ಕಾರಣವಾಗಿದೆ-ಎಂದು ನನಗೆ ಚೆನ್ನಾಗಿ ಮನದಟ್ಟಾಯಿತು.

**ನಾರದ:**—ಹರಿಯು ಎಂದಿದ್ದರೂ ನಿಮ್ಮ ಪಕ್ಷದಲ್ಲೇ ಇರುವನು. ಬ್ರಹ್ಮನು ತ್ರಿಪುರನಾಶಕ್ಕೆ ಅವಧಿಯನ್ನೂ ಕಾರಣಗಳನ್ನೂ ವಿಧಿಸಿರುವನು. ಬ್ರಹ್ಮೋಪದೇಶಾನುಸಾರವಾಗಿ, ನೀನು ಸಕಲ ಸನ್ನಾಹಗಳೊಡನೆ ತ್ರಿಪುರವನ್ನು ಮುತ್ತಿ ನಾಶಮಾಡಬೇಕು. ನಿನ್ನ ಸನ್ನಾಹಗಳಿಗೆ ಹರಿಯು ಮುಖಂಡನಾಗಿ ನಿಲ್ಲುವುದಿಲ್ಲವಾಗಿ, ನೀನು ಹೇಗಾದರೂ ಮಾಡಿ ಶಿವನನ್ನು ಒಪ್ಪಿಸಿಕೊಳ್ಳುವವನಾಗು.

**ಇಂದ್ರ:**— ಹಾಗೆಯೇ ಮಾಡುತ್ತೇನೆ.

**ಗುರು:**— ದೇವರಾಜ, ನೀನು ನನ್ನ ಮಾತು ಕೇಳುವುದಾದರೆ ಯಾವ ದೇವರ ಸಹಾಯವೂ ಇಲ್ಲದೆ ಜಯವನ್ನು ಪಡೆಯಬಹುದು.

ಆದರೆ ನೀನು ಕೇಳುವಂತಿಲ್ಲ. ನೀನು ತ್ರಿಮೂರ್ತಿಗಳ ನೆರವನ್ನು ಸಂಪಾದಿಸಿದರೂ ನನ್ನ ನೀತಿಯನ್ನು ಬಿಡಬೇಡ.

**ಇಂದ್ರ:—** ಎಲ್ಲವನ್ನೂ ಬ್ರಹ್ಮದೇವನಿಗೆ ನಿವೇದಿಸೋಣ. ತಾವೂ ದಯಮಾಡಿಸಿ. ಬ್ರಹ್ಮನು ಹೇಗೆ ಅಪ್ಪಣೆಕೊಡುವನೋ ಹಾಗೆ ಆಚರಿಸೋಣ.

( ಹೋಗುವರು)

---

## ಪಂಚಮ ಚಿತ್ರ

**ಸ್ಥಳ:—** ಭೂಲೋಕದಲ್ಲಿ ಮೇರುಪರ್ವತದ ಒಂದು ಶಿಖರದಲ್ಲಿ ಭೃಗು, ಜರತ್ಕಾರು, ಅಶ್ವಿನಿದೇವತೆಗಳು, ಗಂಧರ್ವರಾಜನಾದ ವಿಶ್ವಾವಸು, ಋಭುದೇವತೆಗಳ ಪ್ರಭುವಾದ ಋಭುಕ್ಷನ್, ಕಂದರ್ಪ, ಚಿತ್ರಗುಪ್ತ ಇವರು ಸಂಧಿಸಿರುವರು.

**ಋಭು:—** ನಾವು ಇಲ್ಲಿ ಸೇರಿರುವುದನ್ನು ಅಸುರರ ಗೂಢಚಾರರಾರೂ ನೋಡಲಿಲ್ಲವಷ್ಟೆ ?

**ಜ್ಯೇಷ್ಠ ಅಶ್ವಿನಿ:—** ಅಸುರರು ಮನುಷ್ಯಜಾತಿಗೆ ಸ್ವರೂಪಹಾನಿಯನ್ನುಂಟು ಮಾಡಿ, ತಮ್ಮ ಜೀತಪಶುಗಳನ್ನಾಗಿ ಮಾಡಿಕೊಂಡಿರುವುದರಿಂದ,ಗೂಢಚಾರರ ಹಾವಳಿ ಇಲ್ಲಿ ಇಲ್ಲ.ಬರುಬರುತ್ತ ನಮ್ಮದೇವಕುಲವೂ ಪಶುರೂಪವನ್ನೇ ಪಡೆಯುತ್ತಿದೆ. ದೇವತೆಗಳಿಗೆ ಪದವಿ ಹೋಯಿತು, ಉದ್ಯೋಗ ತಪ್ಪಿತು, ಭೋಗವು ಮಾಯವಾಯಿತು, ಸ್ವಾತಂತ್ರ್ಯವು ನಷ್ಟವಾಯಿತು. ಭೂಲೋಕದಲ್ಲಿ ಪುಣ್ಯ ಮಾಡಿದವರು, ಅದರ ಫಲವನ್ನು ಅನುಭವಿಸುವುದಕ್ಕಾಗಿ ಭೋಗಶರೀರವನ್ನು ಪಡೆದು ದೇವಲೋಕಕ್ಕೆ ಬರುವರು. ದೇವತೆಗಳ ಶರೀರವು ಶುದ್ಧ ಭೋಗಶರೀರವಾಗಿ, ಭೋಗ ಒಂದಕ್ಕೆ ಮಾತ್ರ ಅರ್ಹಸಾಧನವಾಗಿದೆ. ಇವರಿಗೆ ಭೋಗವಿನಾಶಕ್ಕಿಂತಲೂ ಅಧಿಕವಿಪತ್ತು ಮತ್ತಾವುದುಂಟು ?

**ಕಾಮ:—** ಅಸುರರು ದೇವತೆಗಳ ಭೋಗಶರೀರವನ್ನು ಕಿತ್ತುಕೊಂಡಿಲ್ಲವಷ್ಟೆ! ನಿಮ್ಮ ಶರೀರಕ್ಕೆ ಬಂಧನವನ್ನು ಸಹ ಅವರು ಕಲ್ಪಿಸಿಲ್ಲ.

**ಕನಿಷ್ಠ ಅಶ್ವಿನಿ:—** ಆದರೆ ಈ ಶರೀರವು ಅನುಭವಿಸಬೇಕಾದ ಭೋಗಸಾಮಗ್ರಿಯನ್ನು ಅವರು ಅಪಹರಿಸಿರುವರು. ಸಕಲ ಜೀವಿಗಳಿಗೂ ಸುಖವೃತ್ತಿಯು ಸಹಜಧರ್ಮವಾಗಿದೆ. ಮನಸ್ಸಿನಲ್ಲಿ ಉದ

ಯಿಸತಕ್ಕ ಬಯಕೆಗಳ ಪರಿಪೂರ್ತಿಯೇ ಸುಖವೆನ್ನಿಸುವುದು. ಈ ಬಯಕೆಗಳು ಉತ್ತರೋತ್ತರವಾಗಿ, ಅನಂತವಾಗಿ ಅಭಿವೃದ್ಧಿಯಾಗುವ ಸ್ವಭಾವವುಳ್ಳವುಗಳಾಗಿವೆ. ಆದರೆ ಆಶೆಗೆ ತಕ್ಕಷ್ಟು ಭೋಗಸಾಮಗ್ರಿ ಹೊರಗಡೆ ದೊರೆಯದೆ ಹೋದರೆ ಸುಖವು ಸಿದ್ಧಿಸುವುದಿಲ್ಲ. ಭೂಲೋಕದಲ್ಲಿ ಭೋಗಸಾಮಗ್ರಿ ಕಡಿಮೆ, ಆಶೆ ಮಾತ್ರ ಪಾರವಿಲ್ಲದೆ ಪರುತ್ತದೆ. ಆದ್ದರಿಂದ ಮನುಷ್ಯಜೀವನದಲ್ಲಿ ದುಃಖವು ಅಪರಿಹಾರಕವಾಗಿದೆ. ಮೃಗಗಳಿಗೆ ಇಷ್ಟಾನಿಷ್ಟಪ್ರವೃತ್ತಿ ಇದ್ದರೂ ಬುದ್ಧಿಪೂರ್ವಕವಾದ ಆಶೆ ಇಲ್ಲವಾದ್ದರಿಂದ, ಅವುಗಳ ಜೀವನದಲ್ಲಿ ಆಶೆಗೂ ಭೋಗಕ್ಕೂ ಅಂತರವೇ ಹುಟ್ಟುವುದಿಲ್ಲ. ಇದು ತಾಮಸಿಕ ಸ್ಥಿತಿಯಾಗುವುದು. ಸ್ವರ್ಗದಲ್ಲಿ ಭೋಗಸಾಮಗ್ರಿಯು ಅನಂತವಾಗಿ ದೊರೆಯುವುದರಿಂದ, ಅನಂತವಾದ ಆಶೆಯೂ ಪರಿಪೂರ್ಣವಾಗುವ ಅವಕಾಶವಿದೆ. ಆಶೆಯು ಅನಂತವಾಗಿ ಅಭಿವೃದ್ಧಿಯಾದಾಗ, ಸ್ವರ್ಗದ ಭೋಗಶರೀರವೂ ಅನಂತ ಭೋಗಸಾಮಗ್ರಿಯೂ ಮಾತ್ರವೇ ಅದನ್ನು ತೃಪ್ತಿಪಡಿಸಲು ಶಕ್ತವಾಗಿವೆ. ಈಗ ದೇವತೆಗಳಿಗೆ ಅನಂತ ಬಯಕೆಗಳೂ ಭೋಗಕ್ಕಾಗಿ ಪರಿತಪಿಸುತ್ತಿರುವ ಭೋಗಶರೀರವೂ ಮಾತ್ರ ಉಳಿದು, ಅವರ ಲೋಕದ ಅಖಿಲ ಭೋಗಸಾಮಗ್ರಿಯೂ ಅಪಹೃತವಾಗಿರುವುದರಿಂದ, ಅವರ ಬಾಳು ಆಶಾಹೀನವಾದ ಮೃಗಗಳ ಬಾಳಿಗಿಂತಲೂ ಆಶಾಭಂಗದ ಅಭ್ಯಾಸವುಳ್ಳ ಮನುಷ್ಯರ ಬಾಳಿಗಿಂತಲೂ ಅತಿ ದುಸ್ಸಹವಾಗಿದೆ.

**ವಿಶ್ವಾ:**— ಅದು ನಿಜ! ಗಾನಜೀವಿಗಳಾಗಿದ್ದ ಗಂಧರ್ವರೂ ಅಪ್ಸರಸೆಯರೂ ತ್ರಿಪುರಗಳು ಸ್ಥಾಪಿತವಾದಂದಿನಿಂದ ಗಾನವಿಹೀನರಾಗಿ ಸಂಕಟಪಡುತ್ತಿರುವರು. ಉಳಿದ ದೇವಜಾತಿಗಳವರು ಸಹ ತಂತಮ್ಮ ಸ್ವಭಾವಾನುಗುಣವಾಗಿ ಪ್ರವರ್ತಿಸಲು ಅಡ್ಡಿ ಮಾಡಲ್ಪಟ್ಟು ದುಃಖಕ್ಕೆ ಸಿಕ್ಕಿರುವರು.

**ಚಿತ್ರ:**— ನರಕಲೋಕದ ಯಾತನೆಗಳ ಪರಿಚಯವು ನನಗಿರುವಷ್ಟು ಮತ್ತಾರಿಗೂ ಇಲ್ಲ. ಆದರೆ ಈಗ ನಾನು ಪಡುತ್ತಿರುವ ಯಾತನೆಯನ್ನು ಯಾವ ನಾರಕಿಯೂ ಅನುಭವಿಸಿಲ್ಲ. ನನ್ನ ಸ್ವರೂಪಕ್ಕೂ ಸ್ವಭಾವಕ್ಕೂ ಅನುಗುಣವಾದ ಕಾರ್ಯವನ್ನು, ಅಸುರರು ನನ್ನಿಂದ ತಪ್ಪಿಸಿ

ಬಿಟ್ಟರು. ನಾನು ಏನು ಮಾಡುವುದಕ್ಕೂ ತಿಳಿಯದೆ, ಕಿವಿ ಇದ್ದರೂ ಕಿವುಡನಾಗಿಯೂ ಕಣ್ಣಿದ್ದರೂ ಕುರುಡನಾಗಿಯೂ ಬಾಯಿದ್ದರೂ ಮೂಗನಾಗಿಯೂ ಪರಿಣಮಿಸಿದ್ದೇನೆ.

**ಋಭು:**— ನನ್ನ ಋಭುಜಾತಿಯವರು ದೇವತೆಗಳಲ್ಲಿ ಅತ್ಯಂತ ಕುಶಲಕಲಾ ನಿಪುಣರಾಗಿದ್ದೇವೆ. ಆದರೆ ಅಸುರರ ಯಂತ್ರಕೈಗಾರಿಕೆಯು ನಮ್ಮ ಹಸ್ತಕೌಶಲ್ಯಕ್ಕೂ ಉದ್ಯೋಗಕ್ಕೂ ಮಣ್ಣು ಹಾಕಿದೆ.

**ಜರ:**— ಪರಿಸ್ಥಿತಿಗನುಸಾರವಾಗಿ ಪರಿವರ್ತನೆಯಾಗದವರ ಪಾಡೆಲ್ಲವೂ ಹೀಗೆಯೇ ಸರಿ.

**ಕಾಮ:**— ಮನಸ್ಸು ಮಾತ್ರ ಗಟ್ಟಿಯಾಗಿದ್ದರೆ ಪರಿಸ್ಥಿತಿ ಏನೂ ಮಾಡಲಾರದು. ಪರರು ನಮ್ಮ ಶರೀರವನ್ನು ಬಂಧಿಸಿ ಪೀಡಿಸುವಂತೆ ಮನಸ್ಸನ್ನು ನಿಗ್ರಹಿಸಲಾರರು. ಮನಸ್ಸು ಆನಂದಮಯವಾಗಿದ್ದರೆ ಪರರು ಅದನ್ನು ಕೆಡಿಸಲಾರರು. ಆತ್ಮಾರಾಮನಾದ ಯೋಗಿಯು ಪ್ರತಿಕೂಲ ಪರಿಸ್ಥಿತಿಯನ್ನು ಸಡ್ಡೆಗೆ ತಾರನು. ಲೋಕದಲ್ಲಿ ನಾನು ಮನಸಿಜನೆಂದು ಹೆಸರು ಪಡೆಯಲು ಕಾರಣವೇನು? ನಾನು ಪರಿಸ್ಥಿತಿಯ ಸಂಬಂಧವಿಲ್ಲದೆ ಜನರ ಮನಸ್ಸಿನಲ್ಲಿ ಆವಿರ್ಭವಿಸಿ, ಅವರನ್ನು ವಶಪಡಿಸಿಕೊಳ್ಳುತ್ತಾ ಬರುತ್ತಿದ್ದೇನೆ. ಮನಸ್ಸಿಗಿಂತಲೂ ಪರಿಸ್ಥಿತಿಯು ಪ್ರಬಲವಾಗಿದ್ದರೆ ಇದು ಎಂದಿಗೂ ಸಂಭವಿಸುತ್ತಿರಲಿಲ್ಲ.

**ಭೃಗು:**— ಹುರುಳಿಲ್ಲದ ಈ ಮಾತುಗಳಿಂದ ದೇವತೆಗಳಿಗೆ ಏನೂ ಲಾಭವಿಲ್ಲ. ಅವರು ಪರಾಜಿತರಾಗುವುದಕ್ಕೆ ಪೂರ್ವವೇ ಅವರ ಮನಸ್ಸು ಆನಂದದಿಂದಲೂ ಧ್ಯೇಯಗಳಿಂದಲೂ ತುಂಬಿ ಗಟ್ಟಿಯಾಗಿದ್ದರೆ, ಅವರು ಅಸುರನಿಗ್ರಹವನ್ನು ಸಡ್ಡೆಗೆ ತಾರದಿರಲು ಪ್ರಯತ್ನಿಸಬಹುದಾಗಿತ್ತು. ಈ ನಿಗ್ರಹಕಾಲದಲ್ಲಿ ಅವರು ಯೋಗಾಭ್ಯಾಸವನ್ನು ಕಲಿಯಲಾರರು. ದೇಹನಿಗ್ರಹದಿಂದ ಬಹುಜನರು ತಮ್ಮ ಆನಂದವನ್ನೂ ಧ್ಯೇಯಗಳನ್ನೂ ಕಳೆದುಕೊಳ್ಳುವರು; ಪರಿಸ್ಥಿತಿನಿಗ್ರಹದಿಂದ ಮತ್ತಷ್ಟು ಜನರು ಹಾಗೆಯೇ ನಷ್ಟರಾಗುವರು; ಜೀವನದ ವ್ಯವಸ್ಥೆಯನ್ನೇ ಒಡೆದು ಹಾಕಿ ನಿಗ್ರಹಿಸುವುದರಿಂದ ಸರ್ವರೂ ನಿಶ್ಚೇಷ್ಟಿತರಾಗುವರು. ಅಸುರರು ಜಾಣತನದಿಂದ ದೇವತೆಗಳ ದೇಹದ ತಂಟೆಗೆ ಹೋಗದೆ, ಅವರ ಪರಿಸ್ಥಿತಿ

ಯನ್ನು ನಿಗ್ರಹಿಸಿ, ಅವರ ಜೀವನದ ವ್ಯವಸ್ಥೆಯನ್ನು ಕಿತ್ತುಹಾಕಿಬಿಟ್ಟಿರು ವರು ಅಸುರಸಾಮ್ರಾಜ್ಯದಲ್ಲಿ ನಿನ್ನ ಮನಸಿಜತ್ವವು ಸಹ ನಷ್ಟವಾಗಿದೆ. ನೀನು ಅಕ್ರಮಣ ಮಾಡಿದಾಗ,ಮನುಷ್ಯರೂ ದೇವತೆಗಳೂ ಪಶುಗಳಂತೆ ಈಗ ಕಾಮಬಾಧೆಯನ್ನು ಪರಿಹರಿಸಿಕೊಳ್ಳಬಲ್ಲರೇ ಹೊರತು, ಬುದ್ಧಿ ಪೂರ್ವಕ ನಿನ್ನನ್ನು ಆದರಿಸಿ ಶೃಂಗಾರವಿಲಾಸವನ್ನು ಅನುಭವಿಸಲಾರರು.

**ಜ್ಯೇ. ಅ:**—ಯೋಗವೂ ಧ್ಯೇಯಶಾಲಿತ್ವವೂ ಆತ್ಮಾರಾಮತೆಯೂ ದೇವತೆಗಳ ಸ್ವರೂಪಕ್ಕೆ ದೂರವಾದ ವಿಷಯಗಳಾಗಿವೆ. ಲೋಕದಲ್ಲಿ ಸುಖಸಾಧನೆಗೆ 'ದೇಹಾಭಿವೃದ್ಧಿ' ಮತ್ತು 'ಮಾನಸಿಕಾಭಿವೃದ್ಧಿ' ಎಂದು ಎರಡು ಮಾರ್ಗಗಳುಂಟು. ದೇಹಾಭಿವೃದ್ಧಿ ಮಾರ್ಗಾನುಸಾರಿಗಳಾದ ಜೀವಿಗಳೇ ದೇವತೆಗಳಾಗಿರುವರು. ಮನುಷ್ಯದೇಹವು ನಾವು ಆಶಿಸು ವಷ್ಟು ಭೋಗವನ್ನು ಅನುಭವಿಸಲು ಅಶಕ್ತವಾಗಿದೆ; ಸ್ವಲ್ಪದರಲ್ಲೇ ಇದು ದಣಿದು ಹೋಗುವುದು: ರೋಗ,ಮುಪ್ಪು, ನಿದ್ರೆ, ಆಲಸ್ಯ, ಹಸಿವು, ಮಾಲಿನ್ಯ ಮೊದಲಾದ ದೋಷಗಳು ಇದರ ಭೋಗಶಕ್ತಿಯನ್ನು ಕುಗ್ಗಿ ಸುತ್ತಿವೆ. ದೇವಶರೀರವು ಇಂತಹ ದೋಷಗಳನ್ನು ಕಳೆದುಕೊಂಡು ಅನಂತಭೋಗಶಕ್ತಿಯನ್ನು ಪಡೆದು ಇದೆ. ಈ ಶರೀರಸ್ಥರು ಮಾನಸಿಕ ಕ್ರಿಯಾಶೂನ್ಯರಾಗಿ, ತಮ್ಮ ಭೋಗಶರೀರದಿಂದ ಅನಂತಭೋಗವನ್ನು ಅನುಭವಿಸುತ್ತಾ ಜೀವಿಸುವ ಪ್ರವೃತ್ತಿಯುಳ್ಳವರಾಗಿರುವರು. ಇಂತಹ ವರು ಈಗ ತಮ್ಮ ದೇಹಕ್ಕಿಂತಲೂ ಮನಸ್ಸನ್ನು ಹೆಚ್ಚಾಗಿ ಆಶ್ರಯಿಸಿ ಉದ್ಧಾರರಾಗಬೇಕೆಂದರೆ ಸಾಧ್ಯವೇ ? ಅಜ್ಞಾನಪಾಶಬದ್ಧರಾದ ದೇವತೆ ಗಳು ಜ್ಞಾನಸಾಧನೆಯಿಂದ ಉಜ್ಜೀವಿಸಲಾರರು.

**ಋಭು:**— ನಮಗೆ ಯೋಗಮಾರ್ಗಕ್ಕೆ ಯೋಗ್ಯತೆ ಇಲ್ಲ; ಭೋಗ ಮಾರ್ಗಕ್ಕೆ ಬಾಧೆಯುಂಟಾಗಿದೆ. ದೇವಕುಲಕ್ಕೆ ಮುಂದೇನು ಗತಿ?

**ಭೃಗು:**— ಕಾಲಸ್ಥಿತಿಗನುಸಾರವಾಗಿ ನಿಮ್ಮ ಸ್ವರೂಪವನ್ನು ಮಾರ್ಪಡಿಸಿಕೊಳ್ಳಿರಿ; ಇಲ್ಲದಿದ್ದರೆ ವಿನಾಶವನ್ನೈದಿರಿ.

**ಚಿತ್ರ:**— ಸ್ವರೂಪಾಂತರವನ್ನು ಬುದ್ಧಿಪೂರ್ವಕವಾಗಿ ಸ್ವಪ್ರಯ ತ್ನದಿಂದ ಸಾಧಿಸಲಾದೀತೇ?

**ಜರ:**— ಬೇರೆ ವಿಧವಾಗಿ ಅದನ್ನು ಪಡೆಯಲಾಗುವುದೇ ಇಲ್ಲ.

**ಕ. ಅ:—** ಆ ವಿಧಾನವು ಯೋಗಮಾರ್ಗವಾಗುವುದು. ಅದಕ್ಕೆ ದೇವತೆಗಳು ಅನರ್ಹರು.

**ಭೃಗು:—** ಹಾಗಾದರೆ ದೇವತೆಗಳು ಜೀವಿಸುವುದಕ್ಕೂ ಅನರ್ಹರು.

**ಋಭು:—** ಅದೇತಕ್ಕೆ ನೀವು ಹಾಗೆ ಹೇಳುತ್ತೀರಿ? ಭೂತಗಳಲ್ಲಿ ಪ್ರಾಣಿಗಳು ಶ್ರೇಷ್ಠ. ಪ್ರಾಣಿಗಳಲ್ಲಿ ಕ್ರಿಮಿಕೀಟಾದಿಗಳಿಗಿಂತಲೂ ಪಶುಗಳು ಶ್ರೇಷ್ಠ. ಪಶುಗಳಿಗಿಂತಲೂ ನರರು ಶ್ರೇಷ್ಠರು. ನರರಿಗಿಂತಲೂ ದೇವತೆಗಳು ಶ್ರೇಷ್ಠರು. ಅವರಿಗಿಂತಲೂ ಶ್ರೇಷ್ಠವಾದ ಪದಾರ್ಥವೇ ವಿಶ್ವದಲ್ಲಿ ಇಲ್ಲದಿರುವಾಗ, ದೇವತೆಗಳು ಖಿಲವಾಗಬೇಕೆಂದು ಹೇಳುವುದು ಸರಿಯೆ? ಲೋಕೋತ್ತರವಾದ ಸಿದ್ಧಿಗಳಿಗೂ ಶಕ್ತಿಗಳಿಗೂ ಭೋಗಭಾಗ್ಯಗಳಿಗೂ ಆಕರವಾಗಿರುವ ದೇವಕುಲವು ಎಂದಿಗೂ ಅಪ್ರಯೋಜಕವಾಗಲಾರದು. ದೇವತೆಗಳು ಇದುವರೆಗೂ ಮೂರು ಲೋಕವನ್ನೂ ಸಮರ್ಪಕವಾಗಿ ಆಳಿಲ್ಲವೆ? ಮನುಷ್ಯರ ಯಜ್ಞ, ತಪಸ್ಸು, ಧರ್ಮ, ಪೂಜೆ, ಮಂತ್ರಜಪಗಳನ್ನು ಪರಿಗ್ರಹಿಸಿ, ಅವರಿಗೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಪುರುಷಾರ್ಥಗಳನ್ನೂ ಅನುಗ್ರಹಿಸಲು ಸಮರ್ಥರಾಗಿರುವರು. ಲೋಕಕಂಟಕರಾಗಿದ್ದ ಅಸುರ, ರಾಕ್ಷಸ, ಪಿಶಾಚ, ದಸ್ಯು, ದಾಸ, ಪಣಿ ಮೊದಲಾದವರನ್ನೆಲ್ಲ ನಿಗ್ರಹಿಸುತ್ತಾ ಬಂದಿರುವರು. ಪರ್ವತಗಳ ರೆಕ್ಕೆಗಳನ್ನು ಇಂದ್ರನು ತರೆದದ್ದು ಲೋಕಕಲ್ಯಾಣಾರ್ಥವಾಗಿಯಲ್ಲವೇ? ಪರ್ಜನ್ಯನು ಮಳೆಗರೆದು ಪ್ರಾಣಿಗಳಿಗೆ ಅನ್ನವನ್ನು ಉತ್ಪತ್ತಿ ಮಾಡುತ್ತಿರುವನು. ಯಮನು ಸಕಲರ ಪುಣ್ಯಾಪಾಪಗಳನ್ನೂ ವಿಮರ್ಶೆಮಾಡಿ ಶಾಸನ ಮಾಡುತ್ತಿರುವನು. ವಾಯುವು ಜೀವಿಗಳಲ್ಲಿ ಪ್ರಾಣಶಕ್ತಿಯನ್ನು ಸಂರಕ್ಷಣೆ ಮಾಡುತ್ತ ಬರುತ್ತಿರುವನು. ವರುಣಾಗ್ನಿಗಳು ಜಲವನ್ನೂ ತೇಜಸ್ಸನ್ನೂ ಸಂರಕ್ಷಿಸುತ್ತಿರುವರು. ವಿಶ್ವದ ಸಕಲಶಕ್ತಿಯನ್ನೂ ಒಬ್ಬೊಬ್ಬ ದೇವತೆಯು ನಿರ್ವಹಿಸುತ್ತಿರುವನು. ದೇವತೆಗಳು ಖಿಲರಾದರೆ ವಿಶ್ವದ ವ್ಯವಸ್ಥೆಯೇ ಕಳಚಿಹೋಗುವುದು. ಮನುಷ್ಯರ ಶ್ರುತಿಸ್ಮೃತೀತಿಹಾಸಪುರಾಣಶಾಸ್ತ್ರವೆಲ್ಲವು ದೇವತೆಗಳನ್ನು ಅವಲಂಬಿಸಿಕೊಂಡಿವೆ. ಹೀಗೆ ಸರ್ವಶ್ರೇಷ್ಠವಾಗಿರುವ ದೇವ-ಕುಲದ ವಿನಾಶವನ್ನು ನೀವು ಆಶಿಸುವುದು ನ್ಯಾಯವೇ?

**ಭೃಗು:—** ದೇವತಾಸ್ವರೂಪವು ಮಾರ್ಪಡದೆ ಹೋದರೆ, ದೇವ ಕುಲವು ನಾಶವಾಗುವುದು ಸರ್ವಾವಶ್ಯಕವೇ ಸರಿ.

**ಚಿತ್ರ:—** ನೀವು ಮೊದಲಿನಿಂದಲೂ ದೇವತೆಗಳಿಗೆ ದ್ರೋಹವನ್ನೇ ಆಚರಿಸುತ್ತಾ ಬಂದಿರುವಿರಿ. ಮೃಗಾವಸ್ಥೆಯಲ್ಲಿದ್ದ ಮನುಷ್ಯರನ್ನು ಉದ್ಧರಿಸಬೇಕೆಂದು ನೀವು ಮಾತರಿಶ್ವನ ಸಹಾಯದಿಂದ ಮನುಷ್ಯರಿಗೆ ಸ್ವರ್ಗದಿಂದ ಅಗ್ನಿಯನ್ನು ತಂದು ಕೊಟ್ಟಿರಿ. ಮನುಷ್ಯರ ಉತ್ತರೋತ್ತರ ವಾದ ಅಭಿವೃದ್ಧಿಯೆಲ್ಲಕ್ಕೂ ನೀವು ಅವರಿಗೆ ಕಲಿಸಿದ ಅಗ್ನಿಸ್ಥಾಪನೆಯೇ ಅಸ್ತಿವಾರವಾಗಿದೆ ನಿಮ್ಮ ಸಾಹಸದಿಂದ,ಮನುಷ್ಯರು ದೇವತೆಗಳಿಗೆ ಅವಿ ಧೇಯರಾಗುವಂತೆ ಹೆಚ್ಚಿ ಹೋಗಿರುವರು. ಇಂದ್ರಾಗ್ನಿ ಮುಖ್ಯರಾದ ದೇವತೆಗಳನ್ನು ಭೂಷಿಸುತ್ತಿರುವ ಋಗ್ಯಜುಸ್ಸಾಮ ವೇದಗಳನ್ನು ನಿರಾ ಕರಿಸಿ, ಅಥರ್ವರೊಡನೆಯೂ ಆಂಗೀರಸರೊಡನೆಯೂ ಸೇರಿಕೊಂಡು, ಪರಜಾತಿಯ ದೇವತೋತ್ಕರ್ಷಕವಾದ ನಾಲ್ಕನೆಯ ವೇದವನ್ನು ಕಲ್ಪಿಸಿ ದಿರಿ. ಈ ವೇದವು ಅಥರ್ವಾಂಗೀರಸವೆಂದೂ ಭೃಗ್ವಾಂಗೀರಸವೆಂದೂ ಪ್ರಸಿದ್ಧವಾಗಿದೆ. ಈಚೆಗೆ ನೀವೂ ನಿಮ್ಮ ಕುಟುಂಬದವರೂ ಹರಿಗೆ ವಿರುದ್ಧವಾಗಿ, ಅಸುರರಿಗೆ ಸಹಾಯಕರಾಗಿ ನಿಂತಿರುವಿರಿ. ನಿಮ್ಮ ದೆಸೆ ಯಿಂದ ಹರಿಯು ಪಶುರೂಪವನ್ನೂ ಮನುಷ್ಯರೂಪವನ್ನೂ ಧರಿಸಿ, ಭೂಲೋಕದಲ್ಲಿ ನೆಲಸಬೇಕಾಯಿತು. ನಿಮ್ಮ ಮಗನಾದ ಶುಕ್ರನಲ್ಲವೇ ಈಗಿನ ತ್ರಿಪುರಸಾಮ್ರಾಜ್ಯದ ಸಕಲವೈಭವಕ್ಕೂ ಕಾರಣನಾಗಿರುವವನು? ಮನುಷ್ಯಕುಲದವರಲ್ಲಿ ಸಹ ಸ್ವರ್ಗೀಯ ದೇವಕುಲದವರಿಗೆ ಅಪ್ರಿಯ ರಾಗಿರತಕ್ಕವರು ಮಾತ್ರ ನಿಮಗೆ ಪ್ರಿಯರಾಗಿರುವರು. ಹಿಂದೆ ಹತ್ತು ಮಂದಿ ರಾಜರು ಸುದಾಸನನ್ನು ಮುತ್ತಿದಾಗ, ಇಂದ್ರಾದಿಗಳು ಸುದಾ ಸನ ಪಕ್ಷವನ್ನು ವಹಿಸಿದರೆ, ನೀವು ಅವನ ವೈರಿಗಳ ಪಕ್ಷವನ್ನು ಅವಲಂಬಿ ಸಿದಿರಿ. ವೇದಬಾಹ್ಯನಾದ ಬ್ರಹ್ಮನ ಉಪಾಸಕರಾದ ಬ್ರಾಹ್ಮಣರ ಪಕ್ಷ ವನ್ನು ನೀವು ಹಿಡಿದು, ಸ್ವರ್ಗೀಯ ದೇವತೆಗಳ ಉಪಾಸಕರಾದ ಕ್ಷತ್ರಿ ಯಾದಿ ಜಾತಿಯವರನ್ನು ಹಿಂಸೆಪಡಿಸುತ್ತಾ ಬಂದಿರುವಿರಿ. ನೀವು ಸೃಂಜಯ ವೈತಹವ್ಯರನ್ನು ನಾಶಮಾಡಿದಂತೆಯೇ ನಿಮ್ಮ ವಂಶದ ಪರಶುರಾಮನು ಹೈಹಯರನ್ನೂ ಕ್ಷತ್ರಿಯರನ್ನೂ ಭಯಂಕರವಾಗಿ

ಮಾಡಿದನು. ಒಂದು ಕಾಲದಲ್ಲಿ ನೀವು ಇಂದ್ರನಿಗಿಂತಲೂ ಅಧಿಕವಾಗಿ ಅಗ್ನಿಯನ್ನು ಪಕ್ಷೀಕರಿಸಿದ್ದಿರಿ; ಅನಂತರ ವರುಣನ ಪಕ್ಷವನ್ನು ಸೇರಿ ಕೊಂಡು, 'ವಾರುಣಿ' ಎಂದು ಪ್ರಸಿದ್ಧಿ ಪಡೆದಿರಿ; ಮತ್ತೊಂದು ವೇಳೆ ಪ್ರಜಾಪತಿಯು ಏಕೈಕೋದ್ದ್ವರೆಂದು ಹೇಳಿಕೊಳ್ಳಲಾರಂಭಿಸಿದಿರಿ; ಇನ್ನೊಂದು ವೇಳೆ ಬ್ರಹ್ಮನ ಮಾನಸಪುತ್ರರೆಂದು ಹೆಸರಿಟ್ಟುಕೊಂಡು ಶ್ರೀದೇವಿಯು ಜನಕರಾಗಿ ಪರಿಣಮಿಸಿದಿರಿ; ದಕ್ಷಯಾಗದಲ್ಲಿ ಹರಿಯನ್ನು ಪುರಸ್ಕರಿಸಿ ಹರನನ್ನು ವಿರೋಧಿಸಿದಿರಿ; ಈಚೆಗೆ ಹರಿಯ ವಿರೋಧಿಗಳಾಗಿರುವಿರಿ. ನಿಮಗೆ ಇಂತಹ ಹುಚ್ಚಾಟವೇ ಉದ್ದೇಶವೋ ಅಥವಾ ನಿಮಗೆ ಸ್ಥಿರವಾದ ಧ್ಯೇಯಗಳೇನಾದರೂ ಉಂಟೋ? ನಿಮ್ಮ ಸ್ವೇಚ್ಛಾ ವ್ಯಾಪಾರಕ್ಕೆ ಅರ್ಥವಿದೆಯೋ ? ನೀವು ದೇವದ್ವೇಷಿಗಳಾಗಲು ಕಾರಣ ವೇನು ? ದೇವತೆಗಳು ನಿಮಗೆ ಮಾಡಿದ ಅಪರಾಧವೇನು ?

**ಭೃಗು**:— ನನ್ನ ಜೀವನದ ರಹಸ್ಯವನ್ನು ನಾನು ಯಾರಿಗೂ ಹೇಳಿಲ್ಲ; ಆದರೆ ಈಗ ನಿಮಗೆ ತಿಳಿಸುತ್ತೇನೆ. ಒಂದು ಮಾತಿನಲ್ಲಿ ಹೇಳುವುದಾದರೆ ಸದಾತ್ಮಕ ಮಾನುಷೋತ್ಕರ್ಷ (Ethical Humanism) ವೇ ನನ್ನ ಮತವು. 'ಸದ್ಗುಣಾತ್ಮಕವಾದ ಜೀವನಕ್ಕಿಂತಲೂ ದೊಡ್ಡದಾವುದೂ ಇಲ್ಲ' ಎಂಬುದು ನನ್ನ ಮೊದಲನೆಯ ನಿಯಮವು. ಸದ್ಗುಣದಲ್ಲಿ ದೊಡ್ಡವನಾದವನು ದೇಹಬಲ, ಮಾಯಾಶಕ್ತಿ, ದಿವ್ಯಸಿದ್ಧಿ, ಭೋಗ ಸಂಪತ್ತಿ, ಜ್ಞಾನ, ಭಕ್ತಿ, ಧರ್ಮ, ಪದವಿ ಮೊದಲಾದುವುಗಳಲ್ಲಿ ದೊಡ್ಡವನಾದವನಿಗಿಂತಲೂ ಅತ್ಯಂತಶ್ರೇಷ್ಠನೆಂದು ನಾನು ಭಾವಿಸುತ್ತೇನೆ. ಸಾತ್ವಿಕನಾದ ಒಬ್ಬ ಜಡಮನುಷ್ಯನು ವ್ಯಭಿಚಾರಿಯೂ ಸೋಮಪಾನಾಸಕ್ತನೂ ವಂಚಕನೂ ಕಠಿನನೂ ಆಗಿರುವ ನಿಮ್ಮ ಇಂದ್ರನಿಗಿಂತಲೂ ನೂರುಮಡಿ ಅಧಿಕನು. ಆದ್ದರಿಂದಲೇ ನಾನು ಕುಡಿತಕ್ಕೂ ಹಾದರಕ್ಕೂ ಮೇಹವನ್ನು ತೆತ್ತಿರುವ ಇಂದ್ರನನ್ನು ಬಿಟ್ಟು, ಅಗ್ನಿಯನ್ನು ಮೊದಲು ಪಕ್ಷೀಕರಿಸಿದೆನು. ಅನಂತರ, ಪಶುಯಜ್ಞದಿಂದ ರಕ್ತವನ್ನು ಹೀರುತ್ತಿರುವ ಈ ಕಟುಕನನ್ನು ಬಿಟ್ಟು, ನೀತಿನಿಷ್ಠನಾದ ವರುಣನ ಪಕ್ಷಕ್ಕೆ ಸೇರಿದೆನು. ಏಕದೇಶವ್ಯಾಪ್ತಿಯುಳ್ಳ ಅವನಿಗಿಂತಲೂ ವಿಶ್ವವ್ಯಾಪಕನಾದ ಪ್ರಜಾಪತಿಯು ಹಿರಿಯನೆಂದು ಎಣಿಸಿ ಅವನ ಕಡೆಗೆ ಹೋದೆನು. ಪ್ರಜಾ

ಪತಿಯು ಯಜ್ಞಮತವನ್ನು ಪುರಸ್ಕರಿಸಿದಾಗ, ವಿಶ್ವತತ್ತ್ವಾತ್ಮಕನಾದ ಬ್ರಹ್ಮನನ್ನು ಅನುಸಂಧಾನ ಮಾಡಲು ಬಗೆದೆನು. ಬ್ರಹ್ಮನು ಜಗತ್ಸೃಷ್ಟಿ ಕರ್ತನಾಗಿ ಪರಿಣಮಿಸಿದಾಗ, ವಿಶ್ವಾತ್ಮನೂ ವಿಭುವೂ ಪರಾತ್ಪರನೂ ಆಗಿದ್ದ ನಾರಾಯಣನಿಗೆ ಭಕ್ತನಾದೆನು. ನಾರಾಯಣನು ಮೊದಲು ವಿಶ್ವದ ಗೋಜಿಗೆ ಬರದೆ,ಅದಕ್ಕೆ ಪರನಾಗಿರುತ್ತಿದ್ದನು; ವಿಶ್ವವು ಆತನಿಂದ ಸ್ಥಾಪಿತವಾದ ಅಚಲನಿಯಮಗಳನ್ನನುಸರಿಸಿ, ಯಂತ್ರದಂತೆ ಸ್ವತಂತ್ರ ವಾಗಿ ಕೆಲಸ ಮಾಡಿಕೊಂಡು ಹೋಗುತ್ತಿತ್ತು. ಆದರೆ ದೇವಾಸುರರ ಕಲಹದಿಂದ ವಿಶ್ವವ್ಯವಸ್ಥೆಗೆ ಬಾಧೆಯುಂಟಾದ್ದರಿಂದ, ನಾರಾಯಣನು ತನ್ನ ಪರಸ್ವರೂಪವನ್ನು ತ್ಯಜಿಸಿ, ಜೀವರೂಪವನ್ನು ಧರಿಸಿ, ವಿಶ್ವಪತಿ ಯಾಗಿ, ತ್ರಿಮೂರ್ತಿಯಾಗಿಯೂ ಚತುರ್ವ್ಯೂಹನಾಗಿಯೂ ವಿಶ್ವದ ಸೃಷ್ಟಿ–ಸ್ಥಿತಿ-ಲಯಕಾರ್ಯಗಳನ್ನು ಸಾಕ್ಷಾತ್ತಾಗಿ ವಹಿಸಿದನು. ಜೀವ ಜಾತಿಗಳಲ್ಲಿ ದೇವಜಾತಿ ಶ್ರೇಷ್ಠವಾಗಿದ್ದುದರಿಂದ, ಜೀವರೂಪವನ್ನು ಕೈಕೊಂಡ ನಾರಾಯಣನು ದೇವತಾರೂಪವನ್ನು ಧರಿಸುವುದು ಸಹಜ. ಹರಿಯು ತಮ್ಮ ಸ್ವರೂಪವನ್ನು ಧರಿಸಿ, ಲೋಕಾಧಿಪತ್ಯಕ್ಕೆ ತಮ್ಮನ್ನು ತನ್ನ ಕೈಕೆಳಗಿನ ಅಧಿಕಾರಿಗಳನ್ನಾಗಿ ನಿಯಮಿಸಿ, ಸರ್ವದಾ ತಮ್ಮನ್ನು ಅಸುರರಿಂದ ಸಂರಕ್ಷಿಸುತ್ತಾ ಬರುತ್ತಿದ್ದುದರಿಂದ, ದೇವತೆಗಳಿಗೆ ಪಾಪ ಭೀತಿಯೂ ನೀತಿನಿಷ್ಠೆಯೂ ಸದ್ಗುಣಶಾಲಿತ್ವವೂ ಸಂಪೂರ್ಣವಾಗಿ ನಷ್ಟವಾಗಿಬಿಟ್ಟುವು. ಆಗ ಅವರು ಸಕಲವಿಧವಾದ ದುರ್ಗುಣಗಳನ್ನೂ ಅನುಸಂಧಾನ ಮಾಡುತ್ತ, ಅಸುರರನ್ನೂ ಮನುಷ್ಯರನ್ನೂ ತಿರ್ಯಗ್ಜಂತು ಗಳನ್ನೂ ಹುರಿದು ಬಾಯಲ್ಲಿ ಹಾಕಿಕೊಳ್ಳಲಾರಂಭಿಸಿದರು. ಇದನ್ನು ಸಹಿಸದೆ, ನಾನು ವಿರೋಧಭಕ್ತಿಯಿಂದ ಹರಿಗೆ ನನ್ನ ಮತವನ್ನು ನಿವೇದಿ ಸಲು ಪ್ರಯತ್ನಮಾಡಿದೆನು. ಹರಿಯು ತಮ್ಮ ಸ್ವರೂಪವನ್ನು ಧರಿಸಿ ರುವನೆಂಬ ಅಭಿಮಾನವೂ ತಮ್ಮೊಬ್ಬರ ಹಿತಕ್ಕಾಗಿ ಮಾತ್ರವೇ ಕೆಲಸ ಮಾಡುತ್ತಿರುವನೆಂಬ ಭ್ರಮೆಯೂ ಹೋಗುವವರೆಗೂ ದೇವತೆಗಳ ಜೀವ ನವು ಪರಿಷ್ಕಾರವಾಗುವುದು ಅಸಾಧ್ಯವಾಗಿತ್ತು. ನನ್ನ ಪ್ರಯತ್ನದಿಂದ ಹರಿಯು ದೇವತಾಸ್ವರೂಪವನ್ನು ಬಿಟ್ಟು, ಮತ್ಸ್ಯ, ಕೂರ್ಮ, ವರಾ ಹಾದಿ ಪಶುಸ್ವರೂಪವನ್ನೂ ರಾಮಕೃಷ್ಣಾದಿ ಮಾನುಷರೂಪವನ್ನೂ

ಧರಿಸಿ, ಪಶುಮನುಷ್ಯಾದಿಗಳ ಹಿತಾರ್ಥವಾಗಿ ಸಹ ಕೆಲಸ ಮಾಡಲು ಪ್ರವರ್ತಿಸಿದನು. ಹರಿಯು ದೇವಲೋಕಕ್ಕಿಂತಲೂ ಭೂಲೋಕಕ್ಕೆ ಸಮೀಪಸ್ಥನಾದನು. ಇದರಿಂದ ದೇವತೆಗಳ ಹಮ್ಮು ಅರ್ಧಪಾಲು ಅಡಗಿತು. ಈಗಿನ ಅಸುರವಿಜಯದಿಂದ ಅದು ಸಂಪೂರ್ಣವಾಗಿ ಅಡಗಿ, ದೇವತೆಗಳು ನೀತಿನಿಷ್ಠೆಯನ್ನು ದುರುಳತನದಿಂದ ಉಲ್ಲಂಘನೆ ಮಾಡುವ ಅಭ್ಯಾಸವನ್ನು ನಿಲ್ಲಿಸುವ ಸಂಯೋಗವು ಒದಗಿದೆ. ಈಗಿನ ಪರಿಸ್ಥಿತಿಯಲ್ಲಿ ದೇವಾಸುರ – ಮಾನುಷಭೇದಗಳೆಲ್ಲಾ ನಾಶವಾಗುವ ಸೂಚನೆ ಇದೆ. ಇದು ಸಿದ್ಧಿಸಿದರೆ ಹರಿಯು ತನ್ನ ಸಕಲವಿಧವಾದ ಜೀವಸ್ವರೂಪವನ್ನೂ ಉಪಸಂಹರಿಸಿಕೊಂಡು, ವಿಶ್ವಯಂತ್ರವನ್ನು ಹಿಂದಣಂತೆ ಸ್ವತಂತ್ರವಾಗಿ ಬಿಟ್ಟು, ತಾನು ಹಿಂದಣಂತೆ ಅದಕ್ಕೆ ಪರನಾಗಿರುವುದಕ್ಕೆ ಪ್ರತಿಯಾಗಿ, ಅದರಲ್ಲಿ ಅಂತರ್ಯಾಮಿಯಾಗಿರಲು ಅವಕಾಶವಾಗುವುದು. ಹರಿಯು ಅಂತರ್ಯಾಮಿಯ ಸ್ವರೂಪವನ್ನು ವಹಿಸಿದರೆ, ವಿಶ್ವಕ್ಕೂ ಅವನಿಗೂ ಐಕ್ಯಭಾವವು ಹುಟ್ಟುವುದು; ಈ ಉದ್ದೇಶಾರ್ಥವಾಗಿ ನಾನು ಈಗಿನ ಅಸುರವಿಜಯವನ್ನು ಪುರಸ್ಕರಿಸುತ್ತಿದ್ದೇನೆ.

**ವಿಶ್ವಾ:—** ನಮ್ಮಂತಹ ಉಪದೇವತೆಗಳಲ್ಲದೆ **ಸಾಕ್ಷಾತ್** ನಾರಾಯಣನೂ ನಿಮಗಾಗಿ ಸ್ವರೂಪಹಾನಿ ಪಡೆಯಬೇಕಾಗಿದೆ.

**ಜರ:—** ನಿಮಗೆ ಪ್ರಸನ್ನನಾಗಿರುವ ನಾರಾಯಣನು ಪರ, ವ್ಯೂಹ, ವಿಭವ ಮೊದಲಾದ ರೂಪಗಳನ್ನು ಬಿಟ್ಟು, ಅಂತರ್ಯಾಮಿ ಸ್ವರೂಪವನ್ನು ಧರಿಸದಿದ್ದರೆ ತೀರದೆಂದು ನನ್ನ ಮತವು. ದೇವರು ಇಲ್ಲದಿದ್ದರೆ ಲೋಕಸೂತ್ರವು ನಡೆಯಲಾರದೆಂದೂ ಚೇತನವರ್ಗವು ಉಜ್ಜೀವಿಸಲಾರದೆಂದೂ ಆಸ್ತಿಕರೆಲ್ಲರೂ ಹೇಳುವರಷ್ಟೆ. ಈ ದೇವರು ಎಂತಹನಾಗಿರಬೇಕು? ಇವನು ಸಚ್ಚಿದಾನಂದನು; ಸತ್ಯಜ್ಞಾನಾನಂತ ಸ್ವರೂಪಿಯು; ಶಾಂತನು, ಶಿವನು, ಅದ್ವೈತನು; ಪರಮಾತ್ಮನು; ಪರಾತ್ಪರನು; ಆತ್ಮರೂಪನು; ಅಪ್ರಾಕೃತರೂಪವಿಭವನು; ಸರ್ವಜ್ಞನು; ಸರ್ವವ್ಯಾಪಿಯು, ಸರ್ವಶಕ್ತನು, ಸರ್ವೇಶ್ವರನು, ಸರ್ವಾನಂದಮಯನು, ಸರ್ವಕೃಪಾಳುವು. ಪ್ರಕೃತಿದ್ರವ್ಯಕ್ಕೆ ಮಾತ್ರ ರೂಪಾಕಾರಗಳು ಲಕ್ಷಣವಾದ್ದರಿಂದ, ಪರಮಾತ್ಮನೂ ಅಪ್ರಾಕೃತನೂ ಆದ ದೇವರು ನಿರಾಕಾರ

ನಾಗಿರಬೇಕು. ಅವನು ಸರ್ವಕಲ್ಯಾಣಗುಣಾಕರನೂ ಅಖಿಲ ಹೇಯ ಗುಣ ಪ್ರತ್ಯನೀಕನೂ ಸಕಲ ಸದ್ಗುಣಾಶ್ರಯನೂ ಆಗಿರುವನು.

**ಜ್ಯೇ. ಅ.:—** ಇಂತಹ ದೇವರನ್ನು ನಾವೆಲ್ಲರೂ ಒಪ್ಪುತ್ತೇವೆ.

**ಭೃಗು:—** ಆದರೆ ನಿಮಗೆ ಪರಿಚಿತನಾಗಿರುವ ನಾರಾಯಣನ 'ಅಮರಪ್ರಭು' ಎಂಬ ರೂಪವಾಗಲಿ, ರಾಮಕೃಷ್ಣಾದಿ ವಿಭವಾವತಾರ ರೂಪಗಳಾಗಲಿ ಇಂತಹ ದೇವರಾಗಿಲ್ಲ. ನಿಮ್ಮ ಅಮರಪ್ರಭುವು ಸಾಕಾರನು; ಚತುರ್ಭುಜನು, ಶಂಖಚಕ್ರಾದ್ಯಾಭರಣ ಭೂಷಿತನು; ಪೀತಾಂಬರಧಾರಿಯು, ನೀಲಮೇಘಶ್ಯಾಮನು. ಆತನಿಗೆ ಹೆಂಡಿರು ಮಕ್ಕಳು ಪರಿವಾರ ವಾಸಸ್ಥಾನಗಳುಂಟು; ಶತ್ರುಮಿತ್ರರುಂಟು. ಅವನು ಅಸುರಾರಿಯು. ಅಸುರನಿಗ್ರಹದಲ್ಲಿ ಕಪಟಾಚರಣೆಯು ಆತನಿಗೆ ಮುಖ್ಯ ಉಪಾಯವಾಗಿದೆ. ಅವನ ರೂಪ, ಗುಣ, ವೈಭವ, ಭೋಗ, ಭಾಗ್ಯ ಸಂಪತ್ತೆಲ್ಲವೂ, ಭೌತಿಕವೂ ಪ್ರಾಕೃತವೂ ಆಗಿವೆ. ಅವನು ನಿಂದಾಸ್ತುತಿ ಗಳಿಗೂ ಕಾಮಕ್ರೋಧಾದಿಗಳಿಗೂ ವಶನಾಗಿರುವನು. ಅವನ ಸರ್ವೇ ಶ್ವರತ್ವಕ್ಕೆ ಬ್ರಹ್ಮನೂ ರುದ್ರನೂ ಪ್ರತಿಸ್ಪರ್ಧಿಗಳಾಗಿರುವರು. ಇಂತಹ ಸ್ವರೂಪವುಳ್ಳ ನಾರಾಯಣನು ಎಂದಿಗೂ ಜಗದ್ವಂದ್ಯನಾದ ಭಗವಂತ ನಾಗಲಾರನು. ನಾರಾಯಣನ ಅಂತರ್ಯಾಮಿ ಸ್ವರೂಪವೊಂದೇ ಈ ಪದವಿಗೆ ಅರ್ಹವಾಗಿದೆ.

**ಕ. ಅ:—** ನಾರಾಯಣನು ಈ ಸ್ವರೂಪವನ್ನು ಧರಿಸಲು ಯಾರು ಅಡ್ಡಿಯಾಗಿರುವರು ?

**ಭೃಗು:—** ನಿಮ್ಮ ದೇವಕುಲವು ಅಡ್ಡಿಯಾಗಿದೆ. ನೀವು ಅಖಿಲ ದುರ್ಗುಣಾಮಂದಿರರಾಗಿ ಅಸುರರನ್ನು ನಾಶಮಾಡಿ, ಮನುಷ್ಯರನ್ನು ಜೀತ ಪಶುಗಳಂತೆ ಆಳಬೇಕೆಂದು ಆಶಿಸುತ್ತಿದ್ದೀರಿ. ಅಸುರರೂ ಇದೇ ಮನೋ ಗತವುಳ್ಳವರಾಗಿರುವರು. ದುರ್ಗುಣ, ಅಸುರವೈರ, ಮಾನವಪತಿತ್ವ ಇವು ನಿಮ್ಮ ಈಗಿನ ಸ್ವರೂಪಕ್ಕೆ ಲಕ್ಷಣಗಳಾಗಿವೆ. ಹರಿಯ ವ್ಯೂಹ– ವಿಭವ ಸ್ವರೂಪಗಳ ಸಹಾಯದಿಂದ ನೀವು ಈ ಮೂರನ್ನೂ ಸಾಧಿಸಿ ಕೊಂಡಿರುವಿರಿ. ನಿಮ್ಮ ಈಗಿನ ದುಷ್ಟಸ್ವರೂಪವು ಇರುವ ವರೆಗೂ

ನಾರಾಯಣನು ಶುದ್ಧ 'ಅಂತರ್ಯಾಮಿ' ಮಾತ್ರವಾಗಿ ಇರಲು ಅಡ್ಡಿಯಾಗಿದೆ.

**ಕಾಮ:**— ದೇವತಾಸ್ವರೂಪವು ದುಷ್ಟವೆಂದು ಹೇಗೆ ಹೇಳುತ್ತೀರಿ?

**ಜರ:**— ದೇವತೆಗಳಿಗಿಂತಲೂ ತುಚ್ಛಜೀವಿಗಳು ಲೋಕದಲ್ಲಿ ಮತ್ತಾವುವುಂಟು? ಕಾಮ, ಕ್ರೋಧ, ಲೋಭ, ಮೋಹ, ಮದ, ಅಸೂಯೆ, ಹಿಂಸೆ, ಕ್ರೌರ್ಯ, ಕಾಪಟ್ಯ, ಅನ್ಯಾಯ, ಅಸತ್ಯ ಮೊದಲಾದ ಸಕಲ ದುರ್ಗುಣಗಳೂ ಅವರಲ್ಲಿ ಬೀಡುಗೊಂಡಿವೆ. ವ್ಯಭಿಚಾರ, ಸುರಾಪಾನ, ಬ್ರಹ್ಮಹತ್ಯೆ, ಸ್ವರ್ಣಸ್ತೇಯ ಮೊದಲಾದ ಸಕಲ ಪಾತಕಗಳೂ ಅವರಲ್ಲಿ ನೆಲಸಿವೆ. ಅವರ ಪದವಿ, ಭೋಗಭಾಗ್ಯಗಳು ಅವರ ಸ್ವಾರ್ಜಿತವಲ್ಲವಾದ್ದರಿಂದ, ಅವುಗಳ ಮಹಿಮೆಯು ಅವರಿಗೆ ಸಲ್ಲಲಾರದು. ತಪಸ್ವಿಗಳಲ್ಲೂ ದಿವ್ಯಶಕ್ತಿಗಳಲ್ಲೂ ಸಿದ್ಧಿಗಳಲ್ಲೂ ದೇವತೆಗಳು ಅಸುರರಿಗಿಂತಲೂ ಮಾನವಕುಲದ ಮುನಿಗಳಿಗಿಂತಲೂ ತೀರ ಹಿಂದೆ ಬಿದ್ದಿರುವರು. ಧರ್ಮಾರ್ಥ ಮೋಕ್ಷ ಪುರುಷಾರ್ಥಗಳಿಗೆ ದೇವತೆಗಳು ಅನರ್ಹರು. ವಿದ್ಯಾಪರಿಣತಿ ಇಲ್ಲವಾದ್ದರಿಂದ, ಕಾಮವನ್ನು ಪಶುಗಳಂತೆ ಅನುಭವಿಸಲು ಮಾತ್ರ ಶಕ್ತರಾಗಿರುವರು. ದೇವತೆಗಳು ದೇಹಾಭಿವೃದ್ಧಿಮಾರ್ಗವನ್ನು ಅವಲಂಬಿಸಿ, ಮಾನಸಿಕಾಭಿವೃದ್ಧಿಮಾರ್ಗವನ್ನು ನಿರಾಕರಿಸಿರುವುದರಿಂದ, ಅವಿದ್ಯಾಪಾಶಬದ್ಧರಾಗಿ ಪಶುಗಳಂತೆ ಜೀವಿಸುತ್ತಿರುವರು. ಆಲಸರಾಗಿ, ಜಡರಾಗಿ, ಪರಾವಲಂಬಿಗಳಾಗಿ ಕುಳಿತಕಡೆ ಪಾರುಪತ್ಯ ಮಾಡುತ್ತಿರುವ ಈ ದೇವಕುಲದಲ್ಲಿ ಪ್ರಶಂಸನೀಯವಾದ ಒಂದು ಗುಣವಾದರೂ ಇಲ್ಲ.

**ಋಭು:**— ಒಂದು ಪಕ್ಷಕ್ಕೆ ದೇವತೆಗಳು ಸ್ವತಃ ನಿಕೃಷ್ಟರೂ ನೀಚರೂ ಆಗಿದ್ದರೂ ಮನುಷ್ಯರ ಭಾಗಕ್ಕೆ ಶ್ರೇಷ್ಠರೆನ್ನಿಸಿಲ್ಲವೇ? ಅವರು ಇದುವರೆಗೂ ಮನುಷ್ಯರಿಗೆ ಹಿತಕರವಾಗಿ ಭೂಲೋಕವನ್ನಾಳಿಲ್ಲವೇ? ಅವರ ಆಳಿಕೆಯಲ್ಲಿ ಮನುಷ್ಯರು ಎಷ್ಟೋ ಮುಂದಕ್ಕೆ ಬಂದಿಲ್ಲವೇ?

**ಭೃಗು:**—ಮಾನವಕುಲದ ಸಮಸ್ತ ಅವನತಿಗೂ ಸಕಲ ದೌರ್ಭಾಗ್ಯಕ್ಕೂ ಈ ದೇವತಾಪ್ರಭುತ್ವವೇ ಕಾರಣವಾಗಿದೆ. ಮನುಷ್ಯರು ಸಮು

ಭಯುಗಳಿಂದ ನಿಮ್ಮನ್ನೇ ಪೂಜಿಸುತ್ತಾ ಬರುವಂತೆ ನೀವು ಕಲ್ಪಿಸಿ, ಅವರು ಸಚ್ಚಿದಾನಂದೈಕಘನನಾದ ಭಗವಂತನನ್ನು ಭಜಿಸದಂತೆ ಮಾಡಿರುತ್ತೀರಿ. ನಿಮ್ಮ ಸೇವೆಯೇ ಮನುಷ್ಯರಿಗೆ ಧರ್ಮಪುರುಷಾರ್ಥವೆಂದು ಅವರನ್ನು ವಂಚಿಸಿ, ವೇದಾದಿ ಅಸತ್ಯಶಾಸ್ತ್ರಮಾಲೆಯನ್ನು ಸ್ಥಾಪಿಸಿರುತ್ತೀರಿ. ನಿಮ್ಮ ಆಧಿಪತ್ಯದಿಂದ ಪಾರಾಗದೆ ಇದ್ದರೆ, ಮನುಷ್ಯನು ಸದ್ಗುಣವನ್ನೂ ಜ್ಞಾನಭಕ್ತಿಯೋಗಾದಿಗಳನ್ನೂ ಮೋಕ್ಷವನ್ನೂ ಸಾಧಿಸಲು ಅಶಕ್ತನಾಗಿರುವನು. ಸರ್ವಪುರುಷಾರ್ಥಗಳನ್ನೂ ಸರ್ವಶಕ್ತಿಗಳನ್ನೂ ಸರ್ವಸಾಧನೆಗಳನ್ನೂ ಪಡೆಯುವ ಅರ್ಹತೆಯು ಮಾನವಕುಲವೊಂದಕ್ಕೆ ಮಾತ್ರ ಇದೆ. ಈ ವಿಷಯದಲ್ಲಿ ಅವರು ಪಶುಗಳಿಗಿಂತಲೂ ದೇವಾಸುರರಿಗಿಂತಲೂ ಅತ್ಯಂತ ಶ್ರೇಷ್ಠರಾಗಿರುವರು. ಮಾನವರು ದೇಹಾಭಿವೃದ್ಧಿಗಿಂತಲೂ ಶ್ರೇಷ್ಠವಾದ ಮಾನಸಿಕಾಭಿವೃದ್ಧಿಮಾರ್ಗವನ್ನು ಅನುಸರಿಸಬಲ್ಲರು. ಅವರ ಅಭಿವೃದ್ಧಿಗೆ ನಿಮ್ಮ ದೇವಕುಲವು ಕಂಟಕಸ್ವರೂಪವಾಗಿ ನಿಂತಿದೆ. ತೇಜಸ್ಸು, ಜಲ, ಪ್ರಕಾಶ, ಮಳೆ, ಪ್ರಾಣವಾಯು ಮೊದಲಾದ ವಿಶ್ವಶಕ್ತಿಗಳ ಪ್ರಯೋಜನವನ್ನು, ಲೋಕಕ್ಕೆ ನಿಮ್ಮ ಕುಲದವರು ಒದಗಿಸಿ ಉಪಕಾರ ಮಾಡುತ್ತಿರುವರೆಂದು ನೀವು ಹೇಳಿದಿರಿ. ಇದು ಸರಿಯಲ್ಲ. ಈ ವಿಶ್ವಶಕ್ತಿಗಳು ಪರಮಾತ್ಮನ ಅಚಲನಿಯಮಗಳಿಂದ ವ್ಯಾಪಾರಮಾಡುತ್ತಿರುವುವೇ ಹೊರತು ನಿಮ್ಮ ಇಷ್ಟಾನಿಷ್ಟದಿಂದ ಅಲ್ಲ. ಪರಮಾತ್ಮನು ಹಿಂದೆ ವಿಶ್ವಾತೀತನಾಗಿ ಪರಸ್ವರೂಪದಲ್ಲಿ ಇರುತ್ತಿದ್ದಾಗ ಈ ಶಕ್ತಿಗಳನ್ನು ನೋಡಿಕೊಳ್ಳುವಂತೆ ನಿಮ್ಮಗಳನ್ನು ನಿಯಮಿಸಿದ್ದನು. ಇದರಿಂದ ಈ 'ವಿಶ್ವಶಕ್ತಿಗಳೇ ದೇವತೆಗಳು' ಎಂದು ಭ್ರಮಿಸಲು ಕಾರಣವಾಯಿತು. ಭಗವಂತನು ಪರಸ್ವರೂಪವನ್ನು ಬಿಟ್ಟು, ವಿಶ್ವಪತಿಯಾಗಿ ವಿಶ್ವದಲ್ಲಿ ನೆಲಸಿದಂದಿನಿಂದಲೂ ಈ ಶಕ್ತಿಗಳನ್ನು ತಾನೇ ನೋಡಿಕೊಳ್ಳುತ್ತಿರುವನು. ಇದರಿಂದ ನಿಮಗೆ ವಿಶ್ವಯಂತ್ರದ ಸೇವೆ ಸಹ ತಪ್ಪಿಹೋಗಿದೆ. ಹೀಗೆ ಸ್ವಭಾವದಲ್ಲೂ ಕಾರ್ಯದಲ್ಲೂ ನಿಕೃಷ್ಟರೂ ನೀಚರೂ ಅಪಕಾರಿಗಳೂ ಆಗಿರುವ ನಿಮ್ಮ ದೇವಕುಲವು ಇನ್ನೆಷ್ಟು ದಿವಸ ಜೀವಿಸಿರಬೇಕು? ನೀವು ನಷ್ಟರಾಗದೆ, ಅಧಿಕಾರದಲ್ಲಿ ಮುಂದಿರುವವರೆಗೂ ಮಾನವಕುಲವು ಉತ್ಕರ್ಷವನ್ನು ಪಡೆಯಲಾರದೆ ದುಃಖಜೀವನ ಮಾಡುತ್ತಿರಬೇಕಾಗಿದೆ.

**ಚಿತ್ರ:**— ಅಮರ್ತ್ಯರಾದ ದೇವತೆಗಳು ಸಾಯುವುದೆಂತು ?

**ಭೃಗು:**— ದೇವತೆಗಳು ಸಾಯಬೇಕಾಗಿಲ್ಲ; ಅವರ ದೇವತ್ವವು ನಷ್ಟವಾದರೆ ಸಾಕು.

**ವಿಶ್ವಾ:**— ಎಂದರೆ ಅವರು ಪಶುಗಳಾಗಬೇಕು—ಅಲ್ಲವೇ ?

**ಭೃಗು:**— ಅವರು ಮನುಷ್ಯಸದೃಶರೇಕೆ ಆಗಬಾರದು ?

**ಜ್ಯೇ. ಅ:**— ಮನುಷ್ಯರನ್ನು ದೇವಪದವಿಗೆ ಏರಿಸಬೇಕೆನ್ನದೆ ದೇವತೆಗಳನ್ನು ಮನುಷ್ಯಪದವಿಗೆ ಇಳಿಸಬೇಕೆನ್ನುವುದು ಸಾಧುವೇ ?

**ಭೃಗು:**— ಮನುಷ್ಯಾಭಿವೃದ್ಧಿಯು ಎರಡು ಮೂರು ವಿಧವಾಗಿ ಉಂಟಾಗಬಲ್ಲುದು. ದೇಹಾಭಿವೃದ್ಧಿಯನ್ನು ಮಾತ್ರ ಗಮನಿಸಿ, ವೈಯಕ್ತಿಕವಾಗಿ ದಿವ್ಯಶಕ್ತಿಗಳನ್ನು ಪಡೆದರೆ ದೇವತ್ವವು ಪ್ರಾಪ್ತಿಸುವುದು. ಆತ್ಮಾಭಿವೃದ್ಧಿಯೊಂದನ್ನೇ ಗಮನಿಸಿ, ವಿದೇಹಮುಕ್ತಿಯನ್ನು ಪಡೆಯುವುದು ಮತ್ತೊಂದು ಜಾತಿಯ ಅಭಿವೃದ್ಧಿಯು. ದೇಹಾತ್ಮಗಳ ಸಮಾಭಿವೃದ್ಧಿಯನ್ನು ಬಯಸುವುದು ಮತ್ತೊಂದು ಮಾರ್ಗವು. ಸ್ವರ್ಗಮುಖವಾದ ಅಭಿವೃದ್ಧಿಯು ಲೋಕಕಂಟಕವಾಗಿ ಪರಿಣಮಿಸಿರುವುದರಿಂದ, ದೇವಜೀವಿಗಳು ಮನುಷ್ಯಾವಸ್ಥೆಗೆ ಹಿಂತಿರುಗಿ ಹೋಗಿ, ಅಲ್ಲಿಂದ ಬೇರೊಂದು ಮುಖವಾದ ಅಭಿವೃದ್ಧಿಯನ್ನು ಪಡೆಯುವುದು ಆವಶ್ಯಕವಾಗಿದೆ. ತಮ್ಮ ಪುಣ್ಯವು ಕ್ಷೀಣವಾಯಿತೆಂದರೆ ಮರ್ತ್ಯಲೋಕಕ್ಕೆ ಇಳಿಯುವುದು ದೇವತ್ವಕ್ಕೆ ಆಧಾರಲಕ್ಷಣವೇ ಆಗಿದೆ. ಆದ್ದರಿಂದ ದೇವತೆಗಳು ಮನುಷ್ಯಾವಸ್ಥೆಗೆ ಇಳಿದು, ಅವರೊಡನೆ ಐಕ್ಯವಾಗಬೇಕೆಂಬ ಬಯಕೆಯು ಅಸಾಧುವೆನ್ನಲಾಗುವುದಿಲ್ಲ.

**ಕ. ಅ:**— ದೇವತೆಗಳು ಮನುಷ್ಯರಾಗಬೇಕಾದರೆ ಅಸುರರು ಏನಾಗಬೇಕು ?

**ಭೃಗು:**— ಅವರೂ ಮನುಷ್ಯಾವಸ್ಥೆಯನ್ನೇ ಪಡೆಯಬೇಕು. ಲೋಕದಲ್ಲಿ ಅತಿಮಾನುಷಾವಸ್ಥೆ ( Super humanism ) ಯು ವಿಲುಪ್ತವಾಗಿ ಮಾನುಷಾವಸ್ಥೆಯು ಸರ್ವಪ್ರಧಾನವಾಗಬೇಕು.

**ಋಭು:**— ಮನುಷ್ಯರಿಗೆ ನಾಯಕರೇ ಬೇಕಿಲ್ಲವೆನ್ನುತ್ತೀರೋ

**ಭೃಗು:**— ಲೋಕದಲ್ಲಿ ಸ್ವಾಮಿಭೃತ್ಯನ್ಯಾಯವೂ ಆಸುರಸೆಂಬ ಭೇದವೂ ನಾಶವಾಗಬೇಕೆಂದು ನಾನು ಬಯಸುತ್ತೇನೆ. ನಾನು ಸರ್ವ ಸಮತೆಯ ಉಪಾಸಕನು. ವಿಶ್ವಪತಿ, ಅಮರಪತಿ, ಪ್ರಜಾಪತಿ, ಪಶು ಪತಿ, ನರಪತಿ ಮೊದಲಾದ ಪ್ರಭುಗಳೆಲ್ಲರೂ ಹೋಗಬೇಕು. ವಿಶ್ವ ಪತಿಯು ವಿಶ್ವದಲ್ಲಿ ಐಕ್ಯನಾಗಬೇಕು. ನರಸಮಾಜವೇ ನರಪತಿಯಾಗ ಬೇಕು.

**ಜ್ಯೇ. ಅ:**— ನೀವು ಇದುವರೆಗೆ ಹೇಳಿದ್ದೇನಾಯಿತೆಂದರೆ-(೧) ಸದ್ಗುಣಸಿದ್ಧಿಯೇ ಶ್ರೇಷ್ಠತೆಗೆ ಕಾರಣವಾಗಿರಬೇಕು. (೨) ಸದ್ಗುಣ ಸಿದ್ಧಿಯ ಪರಾಕಾಷ್ಟೆಯು, ಆಧ್ಯಾತ್ಮಿಕಸ್ವರೂಪಿಯಾದ ಭಗವಂತನಲ್ಲಿ ಮಾತ್ರ ಇರಬಲ್ಲುದು. (೩) ಇಂತಹ ಭಗವಂತನು ವಿಶ್ವಾಂತರ್ಯಾಮಿ ಸ್ವರೂಪದಲ್ಲಿ ಮಾತ್ರ ಇರಬಲ್ಲನು. (೪) ಸದ್ಗುಣಸಿದ್ಧಿಗೂ ಅಧ್ಯಾತ್ಮ ಶ್ರೇಯಸ್ಸಿಗೂ ಅಂತರ್ಯಾಮಿ ಭಗವಂತನ ಭಜನೆಗೂ ಮಾನವರು ಮಾತ್ರವೇ ಅರ್ಹರಾದುದರಿಂದ ಜೀವವರ್ಗಗಳಲ್ಲಿ ಅವರು ಪ್ರಾಧಾನ್ಯ ವನ್ನು ಪಡೆಯಬೇಕು. (೫) ಇವುಗಳಿಗೆ ಕಂಟಕಪ್ರಾಯರಾಗಿರುವ ದೇವಾಸುರರು ಖಿಲರಾಗಿ ಮನುಷ್ಯಾವಸ್ಥೆಗೆ ಇಳಿಯಬೇಕು. (೬) ಚೇತನ ವರ್ಗವು ಸ್ವಾಮಿಸೇವಕ ಭೇದವಿಲ್ಲದೆ ಸರ್ವಸಮತೆಯಿಂದ ವ್ಯವಸ್ಥೆ ಪಡೆಯಬೇಕು.

**ಭೃಗು:** -- ನನ್ನ ಮತಕ್ಕೆ ಇವೇ ಸೂತ್ರಗಳಾಗಿವೆ.

**ಕ: ಅ:**— ಒಂದು ವಿಧವಾಗಿ ಯೋಚಿಸಿದರೆ, ಈ ಸಾರಾಂಶಗಳು ಸತ್ಯವಾದುವೆಂದು ತೋರುತ್ತವೆ.

**ಋಭು:**— ನಾನೂ ಹಾಗೆಯೇ ಯೋಚಿಸುತ್ತೇನೆ ಇದು ಮನು ಷ್ಯರ ಯುಗವು. ದಿವ್ಯಶಕ್ತಿಗಳು ಈಗ ಅಸ್ತವಾಗಿವೆ. ದೇವತೆಗಳು ಪದಚ್ಯುತರಾಗಿ ಮುಂಗಾಣದಿರುವರು. ಅವರು ಮನುಷ್ಯರೊಡನೆ ಮಿಳಿತರಾದರೆ ಉದ್ಧಾರರಾಗಬಲ್ಲರೇ ಹೊರತಾಗಿ ಬೇರೆ ಮಾರ್ಗದಿಂದ ಆಗಲಾರರು.

**ಕಾಮ:**— ಇಲ್ಲಿ ನೆರೆದಿರುವ ನಾನು, ಗಂಧರ್ವರು, ಚಿತ್ರಗುಪ್ತ, ಋಭುಗಳು, ಅಶ್ವಿನಿದೇವತೆಗಳು ಇವರೆಲ್ಲರೂ ದೇವಕೂಟದಲ್ಲಿ ಅತಿ

ನಿಕೃಷ್ಟರೆಂದು ಭಾವಿಸಲ್ಪಟ್ಟಿದ್ದೇವೆ. ಉಪಕಾರಶಕ್ತಿಯಲ್ಲಿ ನಾವು ಇಂದ್ರಾದಿಗಳನ್ನು ವಿಾರಿಸಿದ್ದರೂ ನಮಗೆ ದೇವಕುಲದವರು ಅನ್ಯಾಯ ಮಾಡಿರುವರು. ದೇವತ್ವವು ನಾಶವಾಗುವುದರಿಂದ ನಮಗೆ ನಷ್ಟವೇನೂ ಇಲ್ಲ. ಸರ್ವಸಮತಾಕಾಲದಲ್ಲಿ ನಾವು ನಮ್ಮ ನಮ್ಮ ಸಕಲ ಶಕ್ತಿ ಸಾಮರ್ಥ್ಯಗಳನ್ನೂ ಪ್ರಕಾಶಪಡಿಸಿ, ಅಧಿಕ ಕೀರ್ತಿಪ್ರತಿಷ್ಠೆಗಳನ್ನು ಪಡೆಯುವ ಅವಕಾಶವುಂಟು.

**ಜ್ಯೇ. ಅ:—** ಅದೆಲ್ಲಾ ಸರಿಯೆ. ಆದರೆ ಈ ಸಾರಾಂಶಗಳು ಈಗಿನ ಅಸುರವಿಜಯದಿಂದ ಹೇಗೆ ಸಿದ್ಧಿಸಲಾಪವು ?

**ಭೃಗು:—** ಅಸುರರು ಮನುಷ್ಯರಂತೆ ವಿದ್ಯೆಯನ್ನೂ ಜ್ಞಾನವನ್ನೂ ಆಶ್ರಯಿಸಿ ಬ್ರಹ್ಮನನ್ನು ಸಾಧಿಸಿದರು ದೇಹಾಭಿವೃದ್ಧಿಗೂ ವೈಯಕ್ತಿಕ ದಿವ್ಯಶಕ್ತಿಗಳ ಪ್ರಾಪ್ತಿಗೂ ಆಶಿಸದೆ, ದಿವ್ಯಸಮಾಜ ಯಂತ್ರವನ್ನು ರಚಿಸಿಕೊಂಡು ಶ್ರೇಯಸ್ಸನ್ನು ಪಡೆದರು. ನಾಸ್ತಿಕರಾಗಿ ದಂಡ-ನೀತಿಶಾಸ್ತ್ರವನ್ನು ಮಾತ್ರ ಪುರಸ್ಕರಿಸಿದರು. ಅವರ ರಾಜನಾದ ತಾರಕಾಕ್ಷನು ಸದ್ಗುಣಸಿದ್ಧಿಗೆ ಅಗ್ರಮರ್ಯಾದೆಯನ್ನು ಕೊಟ್ಟಿರುವನು. ಈ ವಿಧವಾಗಿ ಅಸುರರು ಮನುಷ್ಯಲಕ್ಷಣಗಳನ್ನು ಪಡೆಯುತ್ತಾ ಬರುತ್ತಿರುವರು.

**ವಿಶ್ವಾ:—** ಮೊದಲು ದೇವತೆಗಳ ವಿಷಯವನ್ನು ಹೇಳಿ.

**ಭೃಗು:—** ಅಸುರರು ಈಗ ದೇವತೆಗಳ ಪ್ರಭುತ್ವವನ್ನು, ಸರ್ವತ್ರ ಮೂಲೋತ್ಪಾಟನ ಮಾಡಿರುವರು. ದೇವತಾಪರಗಳಾದ ಶಾಸ್ತ್ರಗಳನ್ನೂ ಸಂಸ್ಥೆಗಳನ್ನೂ ಧ್ವಂಸಮಾಡಿ, ಮನುಷ್ಯರನ್ನು ದೇವವಿರೋಧಿಗಳನ್ನಾಗಿ ಮಾಡಿರುವರು. ಅಸುರನಿಗ್ರಹದಿಂದ ದೇವತೆಗಳು ಕಂಗೆಟ್ಟು, ತಮ್ಮ ಸ್ವರೂಪದ ಕುಂದುಕೊರತೆಗಳನ್ನೆಲ್ಲಾ ಅರಿತು, ತಾವು ದೇವತ್ವವನ್ನು ಬಿಡದೆ ಇದ್ದರೆ ತಮಗೆ ಉಳಿಗಾಲವಿಲ್ಲವೆಂದು ಮನದಟ್ಟು ಮಾಡಿಕೊಳ್ಳುತ್ತಿರುವರು. ತ್ರಿಲೋಕದಲ್ಲೂ ದೇವತೆಗಳು ಕಲ್ಪಿಸಿದ್ದ ಅತಿಮಾನುಷ ವ್ಯವಸ್ಥೆಗಳನ್ನೆಲ್ಲಾ ಕಿತ್ತೊಗೆದು, ಮಾನುಷವ್ಯವಸ್ಥೆಗಳನ್ನು ಸ್ಥಾಪಿಸುತ್ತಾ ಬರುತ್ತಿರುವರು.

**ಕಾಮ:—** ಅದು ಹೇಗೆ ?

**ಭೃಗು:**— ಮನುಷ್ಯರ ಯಂತ್ರವಿದ್ಯೆಯು ಋಭುಗಳ ದಿವ್ಯ ಕಲಾ ಕೌಶಲ್ಯವನ್ನೂ ಮೆಟ್ಟಿದೆ. ಮಾನುಷಿಕವಾದ ಆಯುರ್ವೇದವು ಅಶ್ವಿನಿ ದೇವತೆಗಳ ದೇವವೈದ್ಯವನ್ನು ಮೂಲೆಗೊತ್ತರಿಸಿದೆ. ಮನುಷ್ಯಗಾನವು ಗಂಧರ್ವರ ದೇವಗಾನವನ್ನು ಅಪಹಾಸಿಸಿದೆ. ಅಸುರರು ಕಾಮಪ್ರವೃತ್ತಿಯನ್ನು ಬುದ್ಧಿಗೆ ವಶಪಡಿಸಿ, ಕಂದರ್ಪನ ವ್ಯಾಪಾರವನ್ನು ನಿಲ್ಲಿಸಿರುವರು. ವಿಶ್ವದ ಶಕ್ತಿಗಳನ್ನು ವಶಪಡಿಸಿಕೊಳ್ಳುವುದಕ್ಕೆ, ಮಣಿಮಂತ್ರತಂತ್ರ ಪೂಜಾದಿಗಳಿಂದ ಲಭಿಸತಕ್ಕ ದೇವತಾಪ್ರಸಾದಕ್ಕಿಂತಲೂ ವಿಜ್ಞಾನ ವಿದ್ಯೆಯು ಅಧಿಕಸಹಕಾರಿ ಎಂದು ಪ್ರಚಾರಪಡಿಸಿ, ಲಕ್ಷ್ಯಾಧಿಮಾನಿ ದೇವತೆಗಳನ್ನೆಲ್ಲಾ ನಿರುದ್ಯೋಗಿಗಳನ್ನಾಗಿ ಮಾಡಿರುವರು. ನರಕಗಳನ್ನೆಲ್ಲಾ ಮುಚ್ಚಿ, ಯಮ-ಚಿತ್ರಗುಪ್ತಾದ್ಯರಿಗೆ ಕೆಲಸವನ್ನು ತಪ್ಪಿಸಿರುವರು.

**ಚಿತ್ರ:**— ಅಸುರರು ನರಕಸಂಸ್ಥೆಯನ್ನು ನಿರ್ಮೂಲಿಸಲು ಉದ್ದೇಶವೇನು ?

**ಜರ:**— ಜೀವಿಗಳು ತಪ್ಪು ಮಾಡುವುದು ಸಹಜ. ಅವರು ಮುಂದೆ ಹಾಗೆ ಮಾಡದೆ ಗುಣಶಾಲಿಗಳಾಗುವುದಕ್ಕೂ ಇತರರಿಗೆ ಮಾರ್ಗದರ್ಶಕರಾಗುವುದಕ್ಕೂ ಶಿಕ್ಷೆಯು ಕಲ್ಪಿತವಾಗುವುದು. ಸದ್ಗುಣ ಸಿದ್ಧಿಯೇ ಶಿಕ್ಷೆಗೆ ಉದ್ದೇಶವು. ಇದು ಶಿಕ್ಷೆಯ ಮಾನುಷಸ್ವರೂಪವು. ಈ ದೃಷ್ಟಿಯಿಂದ, ತಪ್ಪಿತಕ್ಕೆ ಮರುಗಳಿಗೆಯಲ್ಲೇ ಶಿಕ್ಷೆ ವಿಧಿಸಲ್ಪಡಬೇಕು. ತಪ್ಪಿತದಿಂದ ಅಪೂರ್ವವಾದ ಕರ್ಮಫಲವು ಹುಟ್ಟುವುದು—ಎಂಬ ಅತಿ ಮಾನುಷಭಾವನೆ ಇದ್ದರೆ ಅದಕ್ಕೆ ನರಕರೂಪವಾದ ಶಿಕ್ಷೆಯು ಆವಶ್ಯಕವಾಗುವುದು. ಅಸುರರು ಮಾನುಷಶಿಕ್ಷಾಕ್ರಮವನ್ನು ಅಂಗೀಕರಿಸಿ ನರಕಗಳನ್ನು ನಾಶಪಡಿಸಿರುವರು.

**ಋಭು:**— ನೀವು ಹೇಳುವ ಮೇರೆಗೆ, ಅಸುರವಿಜಯದಿಂದ ಮಾನುಷೋತ್ಕರ್ಷವು ಬಹುದೂರ ನಡೆದಿದೆ ಎಂಬುದು ನಿಜ. ಆದರೆ ಅಸುರರು ನರಜಾತಿಯನ್ನು ಮಾತ್ರ ಅತಿ ಭಯಂಕರವಾಗಿ ತುಳಿದು, ತಮ್ಮ ಜೀತ ಪಶುಗಳನ್ನಾಗಿ ಮಾಡಿಕೊಂಡಿರುವರಲ್ಲವೇ ?

**ಭೃಗು:—** ರಜತಲೋಹನಗರಿಗಳವರು ಈ ವಿಚಾರದಲ್ಲಿ ಸ್ವಲ್ಪ ಅತಿಯಾಗಿ ಹೋಗಿರುವುದೇನೋ ನಿಜ. ಅದು ಮುಂದೆ ಅಸುರಪತನಕ್ಕೆ ಕಾರಣವಾಗದಿರದು. ಇದರಲ್ಲಿ ಒಂದು ರಹಸ್ಯವುಂಟು. ಮನುಷ್ಯಕುಲವನ್ನು ದೇವತೆಗಳು ಅನಾದಿಕಾಲದಿಂದಲೂ ತಮ್ಮ ವಶಪಡಿಸಿಕೊಂಡಿದ್ದಾರೆ. ಮನುಷ್ಯರು ತಮ್ಮ ತನುಮನಧನವನ್ನೆಲ್ಲಾ ದೇವತೆಗಳಿಗೆ ಒಪ್ಪಿಸಿ, ಅವರ ಜೀತಪಶುಗಳಾಗಿದ್ದರು. ಇವರ ದೇವತಾಭಿಮಾನವನ್ನೂ ಮೋಹವನ್ನೂ ಹುಟ್ಟಡಗಿಸಬೇಕಾದರೆ, ಅಸುರರು ಇವರನ್ನು ಈಗ ಮಾಡಿರುವಂತೆ ಅತಿ ಕ್ರೂರವಾಗಿ ನಿಗ್ರಹಿಸದಿದ್ದರೆ ಉಪಾಯವಿರಲಿಲ್ಲ.

**ಜ್ಯೇ. ಅ:—** ಅಸುರರು ಸುರವೈರವನ್ನು ಬಿಟ್ಟಿಲ್ಲ. ದೇವತೆಗಳನ್ನು ನಿಶ್ಶೇಷವಾಗಿ ನಾಶಮಾಡಬೇಕೆಂದು ಸಂಕಲ್ಪ ಮಾಡಿರುವರು. ಲೋಕಾಧಿಪತ್ಯವನ್ನು ಬಿಟ್ಟು, ಸರ್ವಸಮತಾವಾದಿಗಳಾಗಲು ಅವರು ಮುಚ್ಚರಲ್ಲ. ಶುಕ್ರನ ರಾಜನೀತಿಯು ಸಕಲ ಸದ್ಗುಣಗಳನ್ನೂ ಭಂಗಪಡಿಸುತ್ತ, ಗುಣಾತೀತವಾದುದೆಂದು ಹೇಳಿಕೊಂಡು ಮೆರೆಯುತ್ತಿದೆ. ಹೀಗಿರುವಾಗ ಅಸುರವಿಜಯವು ನಿಮ್ಮ ಮತದ ನಿಯಮಗಳನ್ನು ಪುರಸ್ಕರಿಸುತ್ತಿದೆ—ಎಂದು ಯಾವ ಧೈರ್ಯದಿಂದ ಹೇಳುತ್ತೀರಿ?

**ಭೃಗು:—** ನೀನು ಹೇಳಿದ ದೋಷಗಳು ಕ್ರಮವಾಗಿ ಹೋಗುವುವು. ಹಾಗೆ ಹೋಗದಿದ್ದರೆ ಅಸುರರು ನಾಶವಾಗುವರು.

**ಋಭು:—** ನಿಮ್ಮ ಮಾತಿನ ಪ್ರಕಾರವಾಗಿಯೂ ದೇವತೆಗಳಂತೆಯೇ ಅಸುರರೂ ಸಮಾನವಾಗಿ ಖಿಲರಾಗಬೇಕು. ನೀವು ದೇವನಾಶನವನ್ನು ಕುರಿತು ಚಿಂತಿಸುವಂತೆ, ಅಸುರನಾಶನದಲ್ಲಿ ಶ್ರದ್ಧಾಪರರಾಗಿಲ್ಲ.

**ಭೃಗು:—** ನೀವು ಅಸುರರನ್ನು ನಾಶಮಾಡಿ; ಅವರು ನಿಮ್ಮನ್ನು ನಾಶಪಡಿಸಲಿ.

**ಕಾಮ:—** ಮನುಷ್ಯರನ್ನು ಮೇಲಕ್ಕೆ ಯಾರು ಎತ್ತಬೇಕು?

**ಭೃಗು:—** ನಿಮ್ಮಗಳ ಹಾವಳಿ ತಪ್ಪಿತೆಂದರೆ ಅವರೇ ಅಭಿವೃದ್ಧಿಯನ್ನು ಪಡೆಯುವರು.

**ಚಿತ್ರ:—** ಅಸುರರು ನಿಮ್ಮ ಮಗನ ಸಹಾಯದಿಂದ ದೇವತೆಗಳನ್ನು ಕ್ರಮವಾಗಿ ನಾಶಪಡಿಸಲಾರಂಭಿಸಿರುವರಷ್ಟೇ. ನಾವು ಅಸುರರನ್ನು ನಾಶಪಡಿಸಲು ನೀವಾದರೂ ಸಹಾಯಮಾಡಬಾರದೇ?

**ಭೃಗು:—** ನನ್ನಿಂದ ನಿಮಗೇನು ಸಹಾಯವಾಗಬೇಕು?

**ಕ. ಅ:—** ಅಸುರನಾಶನಪೂರ್ವಕವಾದ ಪೂರ್ವಪದಪ್ರಾಪ್ತಿಯು ಈಗ ದೇವತೆಗಳಿಗೆ ಲಕ್ಷ್ಯವೆಂದು ನಾವು ತಿಳಿದಿದ್ದೇವೆ. ಅಸುರನಾಶನಪೂರ್ವಕವಾದ ಸ್ವರೂಪಾಂತರ ಪ್ರಾಪ್ತಿಯು ಅವರಿಗೆ ಲಕ್ಷ್ಯವೆಂದು ನೀವು ಹೇಳುತ್ತೀರಿ. ಉಭಯ ಮತಾನುಸಾರವಾಗಿ ಅಸುರನಾಶನವು ನಮಗೆ ಪ್ರಥಮಲಕ್ಷ್ಯವಾಗಿದೆ. ನೀವು ಬರಿಯ ಲಕ್ಷ್ಯವನ್ನು ಮಾತ್ರ ನಿರೂಪಿಸಿಬಿಟ್ಟರೆ ನಮಗೆ ಲಾಭವಿಲ್ಲ. ಇದನ್ನು ನಾವು ಸಾಧಿಸತಕ್ಕ ಮಾರ್ಗವನ್ನು ಹೇಳಿಕೊಡಿ. ಈಗಿನ ಸ್ಥಿತಿಯಲ್ಲಿ ದೇವತೆಗಳು ಏನು ಮಾಡಿದರೆ ಅಸುರರು ನಾಶವಾಗುವರು? ಅವರು ತಮ್ಮ ಸ್ವರೂಪವನ್ನು ಯಾವ ಮಾರ್ಗವಾಗಿ ತಿದ್ದಬೇಕು? ಲೋಕದಲ್ಲಿ ನಿಮ್ಮಂತೆಯೇ ಬಹು ಜನರು 'ಇತರರು ಅದನ್ನು ಮಾಡಬೇಕು! ಇದನ್ನು ಮಾಡಬೇಕು!' ಎಂದು ಲಕ್ಷ್ಯಗಳನ್ನು ವಿಧಿಸಿ, ಅವರು ಅವುಗಳನ್ನು ಸಾಧಿಸುತ್ತಿಲ್ಲವೆಂದು ಆಕ್ಷೇಪ ಮಾಡುವರು; ಅವುಗಳನ್ನು ಹೇಗೆ ಸಾಧಿಸಬೇಕು? ಎಂಬ ಮಾತು ಹುಟ್ಟಿತೆಂದರೆ ಬಾಯಿಗೆ ಬೀಗ ಹಾಕಿಕೊಂಡು, ಸುಳಿವಿಲ್ಲದಂತೆ ಕಾಲಿಗೆ ಬುದ್ಧಿ ಹೇಳುವರು.

**ಭೃಗು:—** ನಾನು ದೇವಮಂತ್ರಿಯಾಗಿಲ್ಲ. ಸಾಧನಾವಿಚಾರವು ನಿಮ್ಮ ಮುಖಂಡರಿಗೂ ಮಂತ್ರಿಗಳಿಗೂ ಸೇರಿದ್ದು.

**ವಿಶ್ವಾ:—** ನೀವು ನಮಗೆ ಕೈಸಹಾಯ ಮಾಡಲಾಗದೆ ಇದ್ದರೆ ಬಾಯ ಸಹಾಯ ಸಹ ಮಾಡಕೂಡದೋ?

**ಭೃಗು:—** ದೇವತೆಗಳಿಗೆ ಬಾಯಿಸಹಾಯದಿಂದ ಲಾಭವಿಲ್ಲ.

**ಕಾಮ:—** ಅದೇಕೆ ಹಾಗೆ ಹೇಳುತ್ತೀರಿ?

**ಭೃಗು:—** ದೇವತೆಗಳು ಸ್ವಪ್ರಯತ್ನಕ್ಕೂ ಬುದ್ಧಿಕಾರ್ಯಕ್ಕೂ ಅನರ್ಹರೆಂದು ನೀವೆಲ್ಲರೂ ಈಗತಾನೆ ವಾದಿಸಿದಿರಿ. ಅಂತಹರಿಗೆ ನನ್ನ

ಬಾಯಿಯ ಉಪನ್ಯಾಸದಿಂದ ಏನು ಪ್ರಯೋಜನ? ಅವರಿಗೆ ಸ್ವರೂಪಾಂತರವು ಪರಸಹಾಯದಿಂದ ಪ್ರಾಪ್ತವಾಗಬೇಕು. ಪರಸಹಾಯವು ದೊರೆಯದೆ ಹೋದರೆ, ಪರನಿರ್ಬಂಧದಿಂದ ಅದು ಪ್ರಾಪ್ತವಾಗಬೇಕು.

(ನಂದೀಶ್ವರನ ಪ್ರವೇಶ)

**ನಂದಿ:—** ಇದೇನು ನೀವೆಲ್ಲರೂ ಇಲ್ಲಿ ನೆರೆದಿರುವಿರಿ?

**ಋಭು:—** (ಕಾಮನಿಗೆ) ಈ ಪಶು ಯಾವುದು? ದೇಹವು ಮನುಷ್ಯರಂತಿದೆ, ಮುಖವು ಕಪಿಯದಾಗಿದೆ.

**ಕಾಮ:—** ಸುಮ್ಮನಿರು. ಇವನು ಶಿವನ ಮುಖ್ಯ ಆಪ್ತನು; ಪಶುವಲ್ಲ.

**ನಂದಿ:—** ಪಶುಶಬ್ದವು ಈಗ ಗೌರವಕ್ಕೆ ಕಾರಣವಾಗಿದೆ. ಈಗ ನೀವು ಉಜ್ಜೀವಿಸಬೇಕಾದರೆ ನನ್ನಂತೆ ಪಶುಗಳಾಗಬೇಕು.

**ವಿಶ್ವಾ:—** ಆಕೃತಿಯಲ್ಲೋ, ಗುಣದಲ್ಲೋ?

**ನಂದಿ:—** ಗುಣದಲ್ಲಿ.

**ಚಿತ್ರ:—** ದೇಹಗುಣದಲ್ಲೋ? ಆತ್ಮಗುಣದಲ್ಲೋ?

**ನಂದಿ:—** ಆತ್ಮಗುಣದಲ್ಲಿ.

**ಭೃಗು:—** ಇದು ಯಾವ ವಿಚಿತ್ರಮತವು?

**ನಂದಿ:—** ನೀವು ದೇವಲೋಕದಿಂದ ಬರಲಿಲ್ಲವೇನು?

**ಜ್ಯೇ. ಅ:—** ನಾವು ಬಹಳಕಾಲದಿಂದ ದೇವಲೋಕವನ್ನು ಬಿಟ್ಟು, ಮನುಷ್ಯಲೋಕದಲ್ಲಿ ತಲೆಮರಸಿಕೊಂಡು ಅಲೆಯುತ್ತಿದ್ದೇವೆ.

**ನಂದಿ:—** ಆದ್ದರಿಂದಲೇ ನೀವು ಈ ನವಮತದ ಪ್ರಾಚುರ್ಯವನ್ನು ತಿಳಿದಿಲ್ಲ. ಈ ಮತವು ಈಗ ದೇವಲೋಕವನ್ನೆಲ್ಲಾ ವ್ಯಾಪಿಸಿದೆ. ಇಂದ್ರಾದಿಯಾದ ದೇವತಾಕುಲವು ಈ ಮತದ ದೀಕ್ಷೆಯನ್ನು ಪಡೆದಿದೆ.

**ಕ. ಅ:—** ಏನು, ನಮ್ಮ ಇಂದ್ರಾದಿಗಳೇ?

**ನಂದಿ:—** ಅಹುದು, ನಿಮ್ಮ ಪ್ರಭುಗಳಾದ ಇಂದ್ರಾದಿಗಳೂ ಅವರ ಕುಲದವರೂ ಈಗ ಪಾಶುಪತಮತಾವಲಂಬಿಗಳಾಗಿರುವರು.

**ವಿಶ್ವಾ:—** ಏನು ಪ್ರಳಯುವಿದು! ದೇವಾಧಿದೇವನಾದ ಇಂದ್ರನು ಪಶುವಾಗಿ ಪರಿಣಮಿಸಿದನೆ! ನಂದಿಯೇ, ಸಮಾಚಾರವನ್ನು ವಿವರವಾಗಿ ತಿಳಿಸು.

**ನಂದಿ:—** ಇಂದ್ರನು ದೇವಋಷಿಗಳೊಡನೆ ಮಂತ್ರಾಲೋಚನೆ ಮಾಡಿಕೊಂಡು ಬ್ರಹ್ಮನ ಬಳಿಗೆ ಹೊರಟನು.

**ಋುಭು:—** ಅದು ನಮಗೆ ಗೊತ್ತು. ನಾವೂ ಆಗಲೇ ದೇವ ಲೋಕವನ್ನು ಬಿಟ್ಟೆವು. ಮುಂದೇನು ನಡೆಯಿತೋ ತಿಳಿಸುದು.

**ಚಿತ್ರ:—** ಬ್ರಹ್ಮನು ಮೋಸಪಡಿಸಿ ಇಂದ್ರನನ್ನು ಪಶ್ಚಾತ್ತಾಪಕ್ಕೆ ತಳ್ಳಿರಬೇಕು. ಅಸುರರು ಮಾಡಬೇಕೆಂದಿದ್ದ ಕಾರ್ಯವನ್ನು ಅವನೇ ಮಾಡಿದಂತೆ ತೋರುತ್ತದೆ. ಈಗಿನ ಅಸುರವಿಜಯಕ್ಕೆಲ್ಲಾ ಬ್ರಹ್ಮ ಶಾರದೆಯರೇ ಮೂಲಕಾರಣರಲ್ಲವೇ ?

**ನಂದಿ:—** ನಡೆದ ಸಂಗತಿ ಹೇಳೋಣವೆಂದರೆ ಅವಕಾಶ ಕೊಡದೆ ಹೀಗೇಕೆ ಅಡಬಡಿಸುತ್ತಿ? ಜೀವಿಗಳ ಪುಣ್ಯಪಾಪಗಳನ್ನು ಕುರಿತು ನೀನು ಮನಸ್ಸಿನಲ್ಲೇ ಊಹಿಸಿ, ಸುಳ್ಳುವರದಿಗಳನ್ನು ಬರೆಯುತ್ತಿದೆ— ಎಂದು ಈಗ ಸ್ಪಷ್ಟವಾಯಿತು. ಅನುಮಾ! ನಿನ್ನ ಸುಳ್ಳಿನಿಂದ ಎಷ್ಟೊಂದು ಕೋಟಿ ನಿರಪರಾಧಿಗಳು ನರಕಯಾತನೆಯನ್ನು ಅನುಭವಿಸಿರಬೇಕು! ಹಾಗೆಯೇ ಅಸಂಖ್ಯಾಕ ಅಯೋಗ್ಯರು ಬಂದು ಸ್ವರ್ಗವನ್ನೂ ಸೇರಿರಬೇಕು. ದೇವ ಲೋಕದ ದೌರ್ಬಲ್ಯಕ್ಕೆ ನೀನೂ ಒಬ್ಬ ಮುಖ್ಯ ಕಾರಣನಾಗಿರಬೇಕು. ಅಸುರರು ನಿನ್ನನ್ನು ಕೆಲಸದಿಂದ ಓಡಿಸಿದ್ದು ಲೋಕಕ್ಕೆ ಕ್ಷೇಮಕರವಾಯಿತೆಂದು ಹೇಳಬೇಕು. ಹಿಂದೆ ನೀನು ಮಾರ್ಕಂಡೇಯನಿಗೆ ಅಲ್ಪಾಯುಸ್ಸೆಂದು ಸುಳ್ಳು ವರದಿ ಹೇಳಿ, ನಿನ್ನೊಡೆಯನು ಶಿವನಿಂದ ಒದೆಗಳನ್ನು ತಿನ್ನುವಂತೆ ಮಾಡಿಸಿದೆ

**ಕಾಮ:—** ನಂದಿಯೇ, ಈ ಬಡಕರಣಿಕನ ಮೇಲೆ ನಿನ್ನ ಪೂರ್ವ ವೈರವನ್ನು ತೀರಿಸಿಕೊಂಡದ್ದಾಯಿತು. ಮುಂದಣ ಸಂಗತಿ ಹೇಳು.

**ನಂದಿ:—** ಸ್ವರಾಜ್ಯವನ್ನು ತಮಗೆ ಕರುಣಿಸುವಂತೆ ಬ್ರಹ್ಮನನ್ನು ಇಂದ್ರನು ಪ್ರಾರ್ಥಿಸಿದನು. ಸ್ವರಾಜ್ಯವು ಕೈಗಳನ್ನು ಪರರ ಕಾಲುಗಳ ಮೇಲಿಕ್ಕಿ ಯಾಚಿಸುವುದರಿಂದಾಗಲಿ, ಕತ್ತಿನ ಮೇಲಿಕ್ಕಿ ಹಿಸುಕುವುದ ರಿಂದಾಗಲಿ ಸಿದ್ಧಿಸಲಾರದೆಂದೂ, ಅದು ಸಂತತ ಸ್ವಪ್ರಯತ್ನ ಧಾರೆಯಿಂದ ಹುಟ್ಟಬೇಕೆಂದೂ, ಅಸುರರು ಅಸಮಾನವಿದ್ಯಾಶಕ್ತಿ, ಯಂತ್ರಶಕ್ತಿ,

ಸಾಮುದಾಯಿಕಶಕ್ತಿಗಳನ್ನು ಸಂಪಾದಿಸಿ, ಅಪ್ರತಿಹತವಾದ ನಾಗರಿಕತೆಯನ್ನು ಕಟ್ಟಿ, ಲೋಕಾಧಿಪತ್ಯವನ್ನು ಮಾಡುತ್ತಿರುವುದರಿಂದ, ಅವರ ತ್ರಿಪುರನಾಗರಿಕತೆಯ ವ್ಯವಸ್ಥೆಗಿಂತಲೂ ಪ್ರಬಲವಾದ ನಾಗರಿಕತೆಯನ್ನು ದೇವತೆಗಳು ಕಲ್ಪಿಸಿ ಸಜ್ಜುಗೊಳಿಸಿಕೊಂಡು, ಅನಂತರ ಅಸುರರ ಮೇಲೆ ಕೈಮಾಡಬೇಕೆಂದೂ, ಆ ಕಾರ್ಯಕ್ಕೆ ತ್ರಿಮೂರ್ತಿಗಳೆಲ್ಲರ ಸಹಾಯವೂ ಅವಶ್ಯಕವೆಂದೂ ಬ್ರಹ್ಮನು ಇಂದ್ರನಿಗೆ ಹೇಳಿದನು.

**ಭೃಗು**:— ಬ್ರಹ್ಮವಾಕ್ಯವು ಎಂದಿಗೂ ಸಟೆಯಾಗದು.

**ಜ್ಯೇ. ಅ**:— ದೇವತೆಗಳು ನೂತನ ನಾಗರಿಕತೆಯನ್ನು ಯಾವ ಕ್ರಮದಲ್ಲಿ ಕಟ್ಟಬೇಕೆಂಬುದನ್ನು ಬ್ರಹ್ಮನು ಉಪದೇಶಿಸಿದನೋ?

**ನಂದಿ**:— ವಿಶ್ವದ ಸಕಲಶಕ್ತಿಗಳನ್ನೂ ವಶಮಾಡಿಕೊಂಡು ಜೋಡಿಸಿ, ಒಂದು ಯಂತ್ರವನ್ನು ನಿರ್ಮಿಸಿ, ದೇವತೆಗಳು ಅದರ ಸಹಾಯದಿಂದ ಮುಂದುವರಿಯುವಂತೆ ಬ್ರಹ್ಮನು ಉಪದೇಶಿಸಿದನು.

**ಕ. ಅ**:— ಈ ಯಂತ್ರವು ಅಸುರವ್ಯವಸ್ಥೆಯನ್ನು ನಿವಾರಿಸುವುದು ಹೇಗೆ?

**ನಂದಿ**:—ತ್ರಿಪುರಯಂತ್ರವು ವಿಶ್ವದ ಶಕ್ತಿಗಳಲ್ಲಿ ಕೆಲವನ್ನು ಮಾತ್ರ ಅವಲಂಬಿಸಿಕೊಂಡು, ಮೂರು ಭಾಗವಾಗಿ ಒಡೆದು, ನಿಶ್ಚಲ (static) ವ್ಯವಸ್ಥೆಯುಳ್ಳದ್ದಾಗಿ, ಭಗವತ್ಸಹಾಯಶೂನ್ಯವಾಗಿ ಇರುತ್ತದೆ. ದೇವತೆಗಳು ಈ ನಾಲ್ಕು ದೋಷಗಳನ್ನೂ ನಿವಾರಿಸಿ, ವಿಶ್ವದ ಸಕಲಶಕ್ತಿಗಳನ್ನೂ ಜಂಗಮ (dynamic) ಪ್ರಕೃತಿಯುಳ್ಳ ಒಂದೇ ಒಂದು ವ್ಯವಸ್ಥೆಗೆ ಜೋಡಿಸಿ, ಭಗವತ್ಸಹಾಯದಿಂದ ಅದನ್ನು ನಿರ್ವಹಿಸಿ ನಡೆಯಿಸಬೇಕೆಂದು ಬ್ರಹ್ಮನು ಇಂದ್ರನಿಗೆ ತಿಳಿಸಿದನು.

**ಋಭು**:— ಈ ಸಾಧನಕ್ಕೆ ಹೆಸರೇನು? ಇದನ್ನು ಯಾರು ಯಾರು ನಿರ್ಮಿಸಬೇಕು?

**ನಂದಿ**:— ಇದಕ್ಕೆ ವಿಶ್ವರಥವೆಂದು ಹೆಸರು. ಇದರ ನಿರ್ಮಾಣಕ್ಕೆ ಬೇಕಾದ ಕಾರ್ಯಶಕ್ತಿಯನ್ನು ದೇವತೆಗಳು ಒದಗಿಸಿದರೆ,ತಾನು ಜಂಗಮಶಕ್ತಿಯನ್ನು ಅನುಗ್ರಹಿಸುವುದಾಗಿಯೂ, ಆದರೆ ತಾನು ಅದಕ್ಕೆ ವಿದ್ಯಾಶಕ್ತಿಯನ್ನೂ ಪ್ರಯೋಗಶಕ್ತಿಯನ್ನೂ ಒದಗಿಸಲಾಗುವುದಿಲ್ಲವಾಗಿಯೂ

ಬ್ರಹ್ಮನು ಹೇಳಿದನು. ರಥವು ಸಿದ್ಧವಾದ ಮೇಲೆ ತಾನೇ ಸಾರಥಿಯಾಗಿ, ಅದಕ್ಕೆ ಜಂಗಮಶಕ್ತಿಯನ್ನು ಕಲ್ಪಿಸುವುದಾಗಿ ಬ್ರಹ್ಮನು ಒಪ್ಪಿದನು. ಇಂದ್ರನೊಡನೆ ಹೋಗಿದ್ದ ಬೃಹಸ್ಪತಿಯು ವಿಶ್ವರಥನಿರ್ಮಾಣಕ್ಕೆ ತಮ್ಮ ದೇವಕುಲದಲ್ಲಿ ಋಭುಗಳು, ತ್ವಷ್ಟೃ, ವಿಶ್ವಕರ್ಮ ಮೊದಲಾದವರಲ್ಲಿ ಕಾರ್ಯಶಕ್ತಿಯು ಅನಂತವಾಗಿ ದೊರೆಯುವುದೆಂದೂ, ಆದರೆ ವಿದ್ಯಾಶಕ್ತಿಯಿಲ್ಲದೆ ಅದು ನಿಷ್ಫಲವೆಂದೂ, ವಿದ್ಯಾಶಕ್ತಿಯ ಸಹಾಯದಿಂದ ರಥವು ಸಿದ್ಧವಾದ ಮೇಲೆ, ಜಂಗಮಶಕ್ತಿ ಪ್ರಯೋಗಶಕ್ತಿಗಳ ಆವಶ್ಯಕತೆ ಹುಟ್ಟುವುದೆಂದೂ ನಿವೇದಿಸಿದನು.

**ಭೃಗು:**—ವಿದ್ಯಾಶಕ್ತಿಯು ದೇವತೆಗಳಿಗೆ ದೊರೆಯುವುದೂ ಇಲ್ಲ; ಅವರು ವಿಶ್ವರಥವನ್ನು ಕಟ್ಟುವುದೂ ಇಲ್ಲ.

**ಕಾಮ:**— ಹಾಗೇಕೆ ಹೇಳುತ್ತೀರಿ?

**ಭೃಗು:**— ದೇವತೆಗಳು ಅನಾದಿಯಾಗಿ ಬುದ್ಧಿವ್ಯವಸಾಯವನ್ನು ನಿರಾಕರಿಸಿ, ದೇಹಾಭಿವೃದ್ಧಿಯನ್ನು ಗಮನಿಸುತ್ತ ಬಂದಿರುವರು. ಅವರ ಸ್ವರೂಪವೂ ಸ್ವಭಾವವೂ ಮಾರ್ಪಡುವ ವರೆಗೂ ವಿದ್ಯಾಶಕ್ತಿಯು ಅವರಲ್ಲಿ ಬೇರೂರಲಾರದು. ದೇವತಾಸ್ವರೂಪವು ಮಾರ್ಪಡುವ ವರೆಗೂ ವಿದ್ಯಾಶಕ್ತಿಯನ್ನು ಪರಿಗ್ರಹಿಸಲು ದೇವತೆಗಳು ಅನರ್ಹರಾದ್ದರಿಂದ, ಸಕಲವಿದ್ಯಾನಿಧಿಯಾದ ಶಾರದಾಪತಿಯು, ಅದನ್ನು ಪ್ರಸಾದಿಸಲು ಅಸಮರ್ಥನಾಗಿರುವನು.

**ನಂದಿ:**— ಅದು ನಿಜ; ದೇವತೆಗಳ ಸ್ವರೂಪವನ್ನು ಯಾರಾದರೂ ಮಾರ್ಪಡಿಸಿಕೊಟ್ಟರೆಂದರೆ, ಅನ್ಯರಸಹಾಯವಿಲ್ಲದೆ ತಾನೇ ದೇವಕುಲಕ್ಕೆ ವಿದ್ಯಾಶಕ್ತಿಯನ್ನು ಸಂಪಾದಿಸಿಕೊಡುವುದಾಗಿ ಬೃಹಸ್ಪತಿಯು ಹೇಳಿದನು.

**ವಿಶ್ವಾ:**— ದೇವತಾಸ್ವರೂಪವು ಮಾರ್ಪಡಬೇಕಾದರೆ ಬ್ರಹ್ಮನೇಕೆ ಅದನ್ನು ಮಾಡಲೊಲ್ಲನು?

**ಭೃಗು:**—ಬ್ರಹ್ಮನು ಸಕಲ ಪದಾರ್ಥಜಾತಿಗಳಿಗೂ ಒಂದೊಂದು ಮೂಲಸ್ವರೂಪವನ್ನು ಸ್ಥಿರವಾಗಿ ಕ್ಲಪ್ತಪಡಿಸಿ ಸೃಷ್ಟಿಮಾಡುತ್ತಿರುವನು. ಮೊದಲು ಕಲ್ಲನ್ನು ಹುಟ್ಟಿಸಿ ಅನಂತರ ಅದನ್ನು ಮರವನ್ನಾಗಿ

ಮಾರ್ಪಡಿಸಿದರೆ, ಅವನ ಸೃಷ್ಟಿಗೆ ವ್ಯವಸ್ಥೆಯೇ ತಪ್ಪುವುದು; ಇಂತಹ ಪರಿವರ್ತನೆಯಿಂದ ಕಲ್ಪಿಸಜಾತಿಯ ಪದಾರ್ಥವು ಲೋಕದಲ್ಲಿ ನಷ್ಟವಾಗಿ ಬಿಡುವುದು. ಇದರಿಂದ ಬ್ರಹ್ಮನು ತನ್ನ ಸೃಷ್ಟಿಯನ್ನು ತಾನೇ ಲಯ ಗೊಳಿಸುತ್ತಾ ಬಂದಂತೆ ಆಗುವುದು. ಬ್ರಹ್ಮನಿಂದ ಸೃಷ್ಟವಾದ ಮೂಲ ವಸ್ತುವು, ಪರಂಪರೆಯಾಗಿ ಪರಿಣಾಮದಿಂದ ರೂಪಾಂತರವನ್ನು ಪಡೆಯು ವುದು 'ಪ್ರಾಕೃತಸೃಷ್ಟಿ' ಎನ್ನಿಸುವುದು. ಪರಿಣಾಮಸೃಷ್ಟಿಯು ಬ್ರಹ್ಮನ ಸೀಮೆಗೆ ಸೇರಿಲ್ಲ. ನೀವು ಬೇಡಿಕೊಂಡರೆ ಬ್ರಹ್ಮನು, ಅಪೇಕ್ಷಿತ ಸ್ವರೂಪ ವುಳ್ಳ ಒಂದು ಹೊಸ ದೇವತಾವರ್ಗವನ್ನು ಸೃಜಿಸುವನೇ ಹೊರತು ಹಳೆಯ ವರ್ಗವನ್ನೇ ಪರಿವರ್ತನೆ ಮಾಡಲು ಹೋಗುವುದಿಲ್ಲ.

**ನಂದಿ:—** ಬ್ರಹ್ಮನು ಇದೇ ರೀತಿ ಹೇಳಿ, ದೇವತೆಗಳು ಈ ಕಾರ್ಯಕ್ಕೆ ಹರಿಹರರ ಸಹಾಯವನ್ನು ಪಡೆಯುವಂತೆ ಉಪದೇಶಿಸಿದನು.

**ಭೃಗು:—** ಇಂದ್ರನು ಅಸುರಾರಿಯಾದ ಹರಿಯನ್ನು ಮೊರೆ ಹೊಕ್ಕನೋ?

**ನಂದಿ:—** ಇಲ್ಲ.

**ಜ್ಯೇ. ಅ:—** ಅದೇನು ಕಾರಣ?

**ನಂದಿ:—** ಹರಿಯು ತನ್ನ ಈಗಿನ ರೂಪಗಳನ್ನೆಲ್ಲಾ ಉಪಸಂಹರಿಸಿ ಕೊಂಡು, ವಿಶ್ವಾಂತರ್ಯಾಮಿಯಾಗಿ ನೆಲೆಸಲು ನಿಶ್ಚಯಿಸಿರುವನಂತೆ.

**ಭೃಗು:—**ಅದು ಬಹು ಸಂತೋಷಪ್ರದವಾದ ವಿಷಯವು. ಇನ್ನು ನಾನು ಹರಿವಿರೋಧವನ್ನು ಬಿಟ್ಟು ಹರಿಭಕ್ತನಾಗುತ್ತೇನೆ.

**ಕ. ಅ:—** ಇಂದ್ರನು ಮಂತ್ರಾಲೋಚನೆ ಮಾಡುವುದಕ್ಕೆ ಮೊದಲೇ ಹರಿಸಹಾಯವನ್ನು ಯಾಚಿಸಿದ್ದನು. ಹರಿಯು ಮೊದಲು ಯಾವ ಸಹಾಯ ಮಾಡುವುದಕ್ಕೂ ಒಪ್ಪಲಿಲ್ಲ. ಇಂದ್ರನು ಬಹಳ ವಾಗಿ ಹೇಳಿಕೊಂಡದ್ದರಮೇಲೆ, ವಿಶ್ವವ್ಯವಸ್ಥೆಯ ಸಂರಕ್ಷಣಾರ್ಥವಾ ಗಿಯೂ, ಬ್ರಹ್ಮನ ಶಾಪಪರಿಪಾಲನಾರ್ಥವಾಗಿಯೂ, ತ್ರಿಪುರದೈತ್ಯರ ಮೇಲೆ ಅಂತರ್ಯಾಮಿ ರೂಪದಿಂದ, ಬಳಸಹಾಯವನ್ನುಮಾತ್ರ ಮಾಡು ವುದಾಗಿ ದೇವತೆಗಳಿಗೆ ಭರವಸೆ ಕೊಟ್ಟಿರುವನಂತೆ.

**ನಂದಿ:—** ಇಂದ್ರನೂ ಹಾಗೆಯೇ ತಿಳಿಸಿದನು.

**ಕಾಮ**:— ಹಾಗಾದರೆ ದೇವತೆಗಳು ಸ್ವರೂಪಾಂತರ ಪ್ರಾಪ್ತಿಗಾಗಿ ಶಿವನಿಗೆ ಶರಣುಹೋಗಬೇಕಾಯಿತೋ?

**ನಂದಿ**:— ಅಂತಹ ಮಹಾಭಾಗ್ಯವು ಅವರಿಗೆ ಈಗಲಾದರೂ ಪ್ರಾಪ್ತವಾದುದಕ್ಕೆ ಸಂತೋಷಪಡು. ಈಗ ದೇವಕುಲವೂ ಇಂದ್ರನೂ ಶಿವನನ್ನಾಶ್ರಯಿಸಿ, ಪಾಶುಪತಮತಾವಲಂಬಿಗಳಾಗಿ, ನೂತನಸ್ವರೂಪವನ್ನು ಪಡೆಯುತ್ತಿರುವರು.

**ಭೃಗು**:— ಇದು ನಿಜವಾದರೆ, ದೇವತೆಗಳ ಭಾಗ್ಯಕ್ಕಿಂತಲೂ ಶಿವನ ಭಾಗ್ಯವು ಅಧಿಕವಾದುದು— ಎನ್ನಬೇಕು.

**ಕಾಮ**:— ನಿಮ್ಮ ಮಾತಿಗೆ ಅರ್ಥವೇನು?

**ಭೃಗು**:— ಶಿವನು ಮೂಲತಃ ದೇವಕೂಟಕ್ಕೆ ಸೇರಿದವನಾಗಿರಲಿಲ್ಲ. ಯಾವ ಜೀವಜಾತಿಯೂ ಇವನನ್ನು ಪೂಜೆ ಮಾಡುತ್ತಿರಲಿಲ್ಲ. ಶಿವನು ಸಾಹಸಪಟ್ಟು, ಪಿಶಾಚಗಳನ್ನು ವಶಪಡಿಸಿಕೊಂಡು ಪಿಶಾಚಪತಿಯಾದನು. ನಗ್ನನಾಗಿ, ಬೂದಿಬಡಕನಾಗಿ, ಸ್ಮಶಾನವಾಸಿಯಾಗಿ, ರುಂಡಮಾಲಾಧರನಾಗಿ, ಕಪಾಲಹಸ್ತನಾಗಿದ್ದ ಇವನು ಕಾಲಭೈರವನೆಂಬ ಹೆಸರಿನಿಂದ, ತನ್ನ ಭಕ್ತರಿಗೆ ಕಾಪಾಲಿಕಮತವೆಂಬ ಮತವನ್ನು ಕಲ್ಪಿಸಿದನು. ಈ ಕಾಪಾಲಿಕರು ಇವನಂತೆಯೇ ವೇಷಧರಿಸಿ. ಸತ್ತ ಹೆಣದ ಮಾಂಸದಿಂದ ಜೀವಿಸುತ್ತ ಅಸಹ್ಯಕರವಾಗಿದ್ದರು. ಸ್ವಲ್ಪಕಾಲವಾದ ಮೇಲೆ ಹರಿಯಿಂದಲೂ ದೇವತೆಗಳಿಂದಲೂ ಪೆಟ್ಟುತಿಂದ ದಾನವರು ಕೆಲವರು ಶಿವನನ್ನು ಆಶ್ರಯಿಸಿದರು. ಇದರಿಂದ ಅಮರಕುಲಕ್ಕೆ ಹರಿಯಿದ್ದಂತೆ ತಾನು ಅಸುರಕುಲಕ್ಕೆ ದೇವರೆಂದು ಶಿವನು ಸಾರಿ "ದೇವಾನಾಂ ದೈವತಂ ವಿಷ್ಣುರ್ದಾನವಾನಾಂ ತ್ರಿಶೂಲ ಧೃಕ್" ಎಂಬ ನಾಣ್ಣುಡಿಯನ್ನು ಹುಟ್ಟಿಸಿದನು. ಹೇಗೋಮಾಡಿ ದಕ್ಷಪುತ್ರಿಯನ್ನು ವಿವಾಹ ಮಾಡಿಕೊಂಡು ದೇವಸಂಬಂಧವನ್ನು ಪಡೆದನು. ಆ ಬಲದಿಂದ ದೇವಲೋಕದಲ್ಲಿ ವಿಶ್ವದ ಒಂದು ಶಕ್ತಿಯನ್ನು ನೋಡಿಕೊಳ್ಳುವ ಉದ್ಯೋಗವನ್ನು ಸಂಪಾದಿಸಿ, ರುದ್ರನೆನ್ನಿಸಿಕೊಂಡು, ವ್ಯೋಮಕೇಶನಾಗಿ, ಬಿರುಗಾಳಿ ಗುಡುಗುಗಳಿಗೆ ಪ್ರೇರಕನಾಗಿ, ಮರುತ್ಸಖನಾಗಿ ದೇವತ್ವವನ್ನು ಸಂಪಾದಿಸಿದನು. ಮರುತ್ತುಗಳಿಗೆ ಪ್ರಾಣಸಖನಾದ ಅಗ್ನಿಯೊಡನೆ ಅವರ ದೆಸೆಯಿಂದ ಮೈತ್ರಿ ಹುಟ್ಟಿ, ಶಿವನು ಯಜ್ಞಸಂಬಂಧವನ್ನು ಒಯ

ಸುವವನಾದನು. ದೇವತೆಗಳು ಇವನನ್ನು ಬಹುಕಾಲ ಯಜ್ಞದಿಂದ ಬಹಿಷ್ಕರಿಸಿದ್ದರು. ಆಗ ಶಿವನು ವೀರಭದ್ರನಾಗಿ, ದಕ್ಷಯಜ್ಞವನ್ನು ಭಂಗಪಡಿಸಿ, ಯಾಗದಲ್ಲಿ ಹವಿರ್ಭಾಗವನ್ನು ಪಡೆಯುವ ಅಧಿಕಾರಿಯಾದನು. ಯಜ್ಞಮತದಲ್ಲಿ ತನಗೆ ಪ್ರಾಧಾನ್ಯವಿಲ್ಲದ್ದರಿಂದ ಇವನು ಅದನ್ನು ವಿರೋಧಿಸಿ,ಮಹಾದೇವನೆಂದು ಹೆಸರಿಟ್ಟುಕೊಂಡು,ಜನರು ಪಶುಗಳನ್ನು ಯಜ್ಞವೆಂದು ಅಗ್ನಿಯಲ್ಲಿ ವಧಿಸುವುದಕ್ಕೆ ಪ್ರತಿಯಾಗಿ, ಪೂಜೆಯೆಂದು ತನಗೆ ಬಲಿಕೊಡಬೇಕೆಂದು ಬೋಧಿಸಿ, ಒಂದು ಹೊಸಮತವನ್ನು ಕಲ್ಪಿಸಿದನು. ಈ ಪಶುಬಲಿಮತವನ್ನು ಮುಂದೆ ಇವನ ಪತ್ನಿಯು ಅತಿ ವಿಸ್ತಾರವಾಗಿ ಹರಡಿದಳು. ಈ ಮತದಿಂದ ದೇವಲೋಕದಲ್ಲಿ ಇವನ ಪ್ರಾಬಲ್ಯವು ಹೆಚ್ಚಲಿಲ್ಲವಾದ್ದರಿಂದ, ಶಿವನು ಮುಂಗಾಣದೆ ಕಂಗೆಟ್ಟಿದ್ದನು. ಆಗ ಇವನು ತನ್ನ ಪತ್ನಿಯು ದಕ್ಷಯಾಗದಲ್ಲಿ ಮೃತಳಾಗಿದ್ದುದರಿಂದ ತಾನು ದೊಡ್ಡ ತಪಸ್ವಿಯೆಂದೂ ಯೋಗಿಯೆಂದೂ ಗುರುವೆಂದೂ ಹೇಳಿಕೊಳ್ಳಲಾರಂಭಿಸಿದನು. ಇದಕ್ಕೆ ಮರುಳಾಗಿ ಕೆಲವುಮಂದಿ, 'ದಕ್ಷಿಣಾಮೂರ್ತಿ' ಎಂಬ ಹೆಸರಿನಿಂದ ಇವನಿಗೆ ಶಿಷ್ಯರಾದರೂ,ದೇವಕುಲವು ಇವನ ಯೋಗಪ್ರಭಾವಕ್ಕೆ ಮಣಿಯಲಿಲ್ಲ. ಆದರೆ ಇವನ ಪೋಷ್ಯವರ್ಗಕ್ಕೆ ಸೇರಿದ್ದ ಮೂಢನಾದ ತಾರಕಾಸುರನೆಂಬವನು, ಈ ಪರಮಯೋಗಿಯು ಪುನರ್ವಿವಾಹವಾಗುವುದಿಲ್ಲವೆಂದು ಭ್ರಮಿಸಿ, ಇವನ ಮಗನಿಂದ ತನಗೆ ಮರಣವಾಗುವಂತೆ ವರವನ್ನು ಪಡೆದು, ದೇವತೆಗಳನ್ನು ಮೆಟ್ಟಿದನು. ಆಗ ಇವನ ಯಥಾರ್ಥ ದೇವತೆಗಳು ಶಿವನನ್ನು ಆಶ್ರಯಿಸಬೇಕಾಗಿ ಬಂದಿತು. ಶಿವನು ತನ್ನ ಯೋಗಪರಿಪಾಲನಾನಟನೆಗಾಗಿ ಕಾಮನನ್ನು ದಹಿಸಿ, ಒಡನೆಯೇ ಯೋಗವನ್ನು ಕಿತ್ತೊಗೆದು, ಪರ್ವತಪ್ರಾಂತ್ಯದ ನೀಚಜಾತಿಯ ಮಾತಂಗ ಕನ್ಯೆಯನ್ನು ವಿವಾಹವಾದನು. ಮತ್ತು ಮಹೇಶ್ವರನೆಂದು ಹೆಸರಿಟ್ಟುಕೊಂಡು, ದೇವತೆಗಳಿಂದ ಸನ್ಮಾನಪಡೆದನು. ಇವನ ಕುಮಾರನು ದೇವ-ಸೇನಾಪತಿಯಾದನು. ದೇವತೆಗಳ ಪ್ರೀತಿವಿಶ್ವಾಸಗಳನ್ನು ಸಂಪಾದಿಸುವ ಸಲುವಾಗಿ,ಶಿವನು ಅಂಧಕಾದಿ ಕೆಲವುಜನ ಅಸುರರನ್ನು ಸಂಹರಿಸಿ, ಗಂಗೆಯ ವೇಗವನ್ನು ನಿಲ್ಲಿಸಿ, ಹಾಲಾಹಲವನ್ನುಂಡು ನೀಲಕಂಠನಾಗಿ, ಚಂದ್ರಚೂಡನಾಗಿ, ನಾಗಭೂಷಣನಾಗಿ, ಕೈಲಾಸಪತಿಯಾದನು.

ಅಲ್ಲದೆ ಇವನು ಈಶಾನನಾಗಿ ದಿಕ್ಪಾಲಕಪದವಿಯನ್ನು ಪಡೆದು, ಕುಬೇರ ಸಖನಾಗಿ ಪ್ರಾಬಲ್ಯವನ್ನು ಪಡೆದನು. ಇವನ ಪತ್ನಿಯಾದ ಶಕ್ತಿಯೂ ಮಕ್ಕಳಾದ ಗಣಪತಿ-ಸ್ಕಂಧರೂ ಲೋಕದಲ್ಲಿ ವಿಚಿತ್ರಮತಗಳನ್ನು ಸ್ಥಾಪಿಸಿದರು; ಶಿವನು ಸಹ ಮಾಹೇಶ್ವರಮತವೆಂಬ ಮತವನ್ನು ಸ್ಥಾಪಿಸಿ ತನ್ನ ಭಕ್ತರು ತನ್ನ ಲಿಂಗವನ್ನು ಪೂಜಿಸುವಂತೆ ವಿಧಿಸಿದನು. ಈ ಬಗೆಯ ಮತಗಳಿಂದ ದೇವತೆಗಳಿಗೆ ಇವನಲ್ಲಿ ತಾತ್ಸಾರ ಹುಟ್ಟಿದ್ದಿತು. ಇಂತಹ ವೇಳೆಯಲ್ಲಿ ಶಿವನು ಏಕಾಏಕಿ ಅಖಿಲ ದೇವಲೋಕವನ್ನೂ ತನ್ನ ಕಾಲಿಗೆ ಬೀಳಿಸಿಕೊಳ್ಳುವ ಅವಕಾಶವನ್ನು ಪಡೆದರೆ, ಆವನ ಭಾಗ್ಯವನ್ನೂ ದೇವತೆಗಳ ದೌರ್ಭಾಗ್ಯವನ್ನೂ ಎಷ್ಟೆಂದು ವರ್ಣಿಸಬಹುದು!

**ನಂದಿ:—** ಆಜನ್ಮ ಶಿವದ್ವೇಷಿಯಾದ ಭೃಗುವೇ, ದಕ್ಷಯಾಗ ಕಾಲದಲ್ಲಿ ನಾವು ನಿನ್ನನ್ನು ದಯೆಯಿಂದ ಉಳುಹಿದ್ದನ್ನು ಮರೆತು, ನೀನು ಮರಳಿ ಶಿವನಿಂದಾನಿರತನಾಗಿದ್ದೀಯೇ. ನೀನು ಮತ್ತೊಮ್ಮೆ ಶಿವನನ್ನು ದೂಷಿಸಿದರೆ ಕೇಡಿಗೊಳಗಾಗುವೆ.

**ಭೃಗು:—** ನಾನು ಹರಿಭಕ್ತನು. ನಿನ್ನ ಗೊಡ್ಡು ಬೆದರಿಕೆಗಳಿಗೆ ನಾನು ಸಗ್ಗುವುದಿಲ್ಲ.

**ನಂದಿ:—** ಹರಿಗೂ ತನಗೂ ಅಭೇದನೆಂದು ಶಿವನು ಪದೇಪದೇ ಸಾರುತ್ತಿರುವನು. ನೀನು ಶಿವರಹಸ್ಯವನ್ನು ಅರಿತವನಲ್ಲ. ನೀನು ವಿವರಿಸಿದ್ದೆಲ್ಲವೂ ಪರಶಿವನ ಲೀಲಾರೂಪಗಳ ವ್ಯಾಪಾರಗಳಾಗಿವೆ. ನೀನು ತಿಳಿಸಿದ ಕಾಲಭೈರವ, ರುದ್ರ, ಶಂಭು, ಮಹಾದೇವ, ಮಹೇಶ್ವರ, ದಕ್ಷಿಣಾಮೂರ್ತಿ, ಈಶಾನ, ಶಿವ ಮೊದಲಾದ ಮೂರ್ತಿಗಳೊಂದೂ ನನ್ನ ಸ್ವಾಮಿಯ ಮೂಲರೂಪಗಳಲ್ಲ. ಇವೆಲ್ಲವೂ ಸದಾಶಿವನೆಂಬ ರೂಪದಿಂದ ಹುಟ್ಟುವುವು. ಸದಾಶಿವನು ವಿಶ್ವಪತಿಯೂ ವಿಶ್ವಕರ್ತಾರನೂ ಆಗಿರುವನು. ಆತನಿಗೂ ಮೇಲೆ, ವಿಶ್ವಕ್ಕೆ ಪರನಾದ ಪರಶಿವನು ಇರುವನು. ಪರಶಿವನಿಗೂ ನಾರಾಯಣನಿಗೂ ಭೇದವಿಲ್ಲ. ನೀನು ಈ ಮೂಲಮೂರ್ತಿಯ ಅರಿವೇ ಇಲ್ಲದೆ, ಆತನ ಪರಿಣಾಮಮೂರ್ತಿಗಳ ಲೀಲಾವ್ಯಾಪಾರಗಳಿಗೆಲ್ಲಾ ಅಪಾರ್ಥಮಾಡಿಕೊಂಡು ಭಗವದಪಚಾರ ಮಾಡುತ್ತಿರುವೆ.

**ಭೃಗು:—** ನೀನು ಹರಿಯ ಮೂಲರೂಪಗಳನ್ನು ಶಿವನಿಗೂ ಆರೋಪಿಸಿಕೊಂಡಿರುವೆ. ಚಿಂತೆಯಿಲ್ಲ. ಈ ಮೂಲರೂಪಗಳ ಹೆಸರು ಹೇಗಿದ್ದರೂ ಅವುಗಳ ಮೇಲೆ ನನ್ನ ಆಕ್ಷೇಪಣೆಯೂ ಇಲ್ಲ. ಆದರೆ ಪರಿಣಾಮರೂಪಗಳು ನಿನ್ನ ಶಿವನ ರೂಪಗಳಂತೆ ಇದ್ದರೆ, ಅವು ನನಗೆ ಅಸಹ್ಯವಾಗಿ ಬೋಧೆಯಾಗುತ್ತವೆ.

**ನಂದಿ:—** ಅದಕ್ಕೆ ನಿನ್ನ ಪಾಪಬುದ್ಧಿ ಕಾರಣವಾಗಿರಬೇಕು. ನೀನು ಪರಶಿವನನ್ನು ದ್ವೇಷಿಸದಿದ್ದರೆ ಅವನ ಪರಿಣಾಮ ಮೂರ್ತಿಗಳೆಲ್ಲ ವನ್ನೂ ಅಂಗೀಕರಿಸಬೇಕಾಗುವುದಿಲ್ಲ. ಹಿಂದಣ ಪರಿಣಾಮರೂಪಗಳು ನಿನಗೆ ಹಿಡಿಸದಿದ್ದರೂ ಈಗ ಶಿವನು ಸಂಕಲ್ಪಿಸಿರುವ ರೂಪವು ಸಮ್ಮತ ವಾಗದೆ ಇರದು.

**ಭೃಗು:—** ಹಾಗಾದರೆ ಅದನ್ನು ವಿವರಿಸು.

**ನಂದಿ:—** ನನ್ನ ಸ್ವಾಮಿಯು ಹರಿಯು ಹಿಂದೆ ಮಾಡಿದಂತೆ ಈಗಿನ ಯುಗಕ್ಕೆ ಯೋಗ್ಯವಾದ ಭಕ್ತಿಮಾರ್ಗವನ್ನು ಪುರಸ್ಕರಿಸಿ, ಸೌಮ್ಯ ರೂಪದಿಂದ ಭಕ್ತವರದನಾಗಲು ಬಗೆದಿರುವನು.

**ಭೃಗು:—** ಅದು ಬಹಳ ಸಂತೋಷದ ವಿಷಯು. ಭಕ್ತವರದನಿಗೆ ದೇವಾಸುರರೂಪಗಳಿಗಿಂತಲೂ ಮಾನುಷರೂಪವು ಸೌಮ್ಯವೂ ಫಲ ಪ್ರದವೂ ಆಗಿರುವುದರಿಂದ, ಹರಿಯು ಮಾನವರೂಪವನ್ನೇ ಪುರಸ್ಕರಿಸಿ, ಮಾನವೋತ್ಕರ್ಷವನ್ನು ಸಾಧಿಸಿರುವನು. ದೇವಾಸುರರು ಇವನ ಭಕ್ತ ರಾಗಬೇಕಾದರೆ, ಮಾನವಸಾರೂಪ್ಯವನ್ನು ಪಡೆಯಬೇಕು; ಸ್ವರ್ಗಪಾತಾಳ ಗಳನ್ನೂ ಮಾನವಲೋಕವಾಗಿ ಮಾರ್ಪಡಿಸಿಕೊಳ್ಳಬೇಕು. ಏಕೆಂದರೆ ನಾರಾಯಣನು "ನಾರ=ನರಸಮುದಾಯವೇ, ಅಯನ=ಆವಾಸವಾಗಿ ಉಳ್ಳವನು" ಎನ್ನಿಸಿರುವನು. ಭಗವಂತನು ಚೇತನಾಚೇತನ ವಿಶ್ವದ ಸಕಲ ಪದಾರ್ಥಗಳಲ್ಲೂ ನೆಲಸಿದ್ದರೂ ಮಾನವರಲ್ಲಿ ಮಾತ್ರ,ತನ್ನ ಪೂರ್ಣ ಶಕ್ತಿಯಿಂದ ಅಂತರ್ಹಿತನಾಗಿ ವಾಸಿಸುತ್ತ ನಾರಾಯಣನೆನ್ನಿಸಿರುವನು. ಈತನನ್ನು ಕಲ್ಲು, ಮಣ್ಣು, ಮೃಗ, ದೇವಾಸುರಾದಿಗಳಲ್ಲಿ ಹುಡುಕಿ ನೋಡುವುದಕ್ಕಿಂತಲೂ ಮಾನವಸಮಾಜದಲ್ಲಿ ಅತಿ ಸುಲಭವಾಗಿ ಕಾಣ

ಬಹುದು; ಮಾನವಸಮಾಜದಲ್ಲಿ ಇವನು ಬಹಳ ಮೇಲುಗಡೆಯಲ್ಲಿಯೇ ಅಭಿವ್ಯಕ್ತನಾಗಿ ಕೈಗೆ ಸಿಕ್ಕುವನು.

**ನಂದಿ:—** ಈ ಮಾರ್ಗದಲ್ಲಿ ಉತ್ತರೋತ್ತರವಾಗಿ ಒಂದು ತೊಂದರೆ ಹುಟ್ಟಬಹುದು. ಮಾನವನಿಗೆ ಮೇಲುಗಡೆ ಇರತಕ್ಕ ದೇವಾಸುರರು ಖಿಲರಾಗಿ, ಅವನಿಗಿಂತಲೂ ಕೋಟ್ಯವಧಿ ಅಧಿಕಸಂಖ್ಯೆಯಲ್ಲಿರುವ ಪಶುಗಳು ಅತ್ಯಂತ ನೀಚಾವಸ್ಥೆಯನ್ನು ಪಡೆಯುವುವು. ಆಗ ಮಾನವನು ತಾನೇ ವಿಶ್ವದಲ್ಲಿ ಸರ್ವಶ್ರೇಷ್ಠನೆಂದೂ, ತನಗಾಗಿ ಮಾತ್ರವೇ ವಿಶ್ವವು ಸೃಷ್ಟವಾಗಿ ಇರುತ್ತಿದೆಯೆಂದೂ, ತನ್ನನ್ನು ವಿಚಾರಿಸುವ ದೇವರಾರೂ ಇಲ್ಲವೆಂದೂ, ತನಗೆ ನಾಶವೇ ಇಲ್ಲವೆಂದೂ, ಪಶುಕೋಟಿಯು ತನ್ನ ಭೋಗಸಾಮಗ್ರಿ ಮಾತ್ರವೆಂದೂ, ಗರ್ವಪಟ್ಟು, ತಾನೇ ದೇವರೆಂದು ತನ್ನನ್ನೇ ಪೂಜಿಸಿಕೊಳ್ಳಲಾರಂಭಿಸುವನು. ಈ ಮಾನವಪಾರಮ್ಯಮತವು ಅತಿ ನಾಸ್ತಿಕವೂ ವಿಶ್ವನಿಯಮವಿರುದ್ಧವೂ ಜೀವಲೋಕಹಿಂಸಕವೂ ಆಗಿರುವುದರಿಂದ, ವಿಜ್ಞಾನಶಾಸ್ತ್ರಕ್ಕೂ ಆಮುಷ್ಮಿಕಶಾಸ್ತ್ರಕ್ಕೂ ವಿರುದ್ಧವಾಗಿರುವುದು. ಒಳಹೊಕ್ಕು ನೋಡಿದರೆ, ಮನುಷ್ಯನು ಮೂಲತಃ ಶುದ್ಧ ಪಶುವೇ ಆಗಿರುವನು. ಆದ್ದರಿಂದ ನನ್ನ ಸ್ವಾಮಿಯು ಇವನ ಪರಿಣಾಮನಿರೂಪಿತ ಸ್ವರೂಪಕ್ಕಿಂತಲೂ ಇವನ ಮೂಲಸ್ವರೂಪವನ್ನು ಮುಖ್ಯವೆಂದು ಉತ್ಕರ್ಷಿಸಿ, ಸಕಲ ಜೀವಕೋಟಿಯೂ ಪಶುಸ್ವರೂಪಾನುಸಂಧಾನದಿಂದ, ತನ್ನಲ್ಲಿ ಭಕ್ತಿಮಾಡಿ ಉಜ್ಜೀವಿಸುವಂತೆ ಸಂಕಲ್ಪಿಸಿರುವನು.

**ಕಾಮ:—** ಹಾಗಾದರೆ ಶಿವನನ್ನು ಭಜಿಸತಕ್ಕವರೆಲ್ಲರೂ ಪಶುಗಳಾಗಬೇಕೆಂದು ಈ ಮತವು ಹೇಳುವದೋ ?

**ನಂದಿ:—** ಅಹುದು; ಇವರ ಉತ್ತಾರಕನಾದ ಶಿವನು; ಪಶುಪತಿ, ಎನ್ನಿಸುವನು. ಇದೇ ನನ್ನ ಸ್ವಾಮಿಯ ಈಗಿನ ಅವತಾರವು.

**ಋಭು:—** ಪಶುಗಳಿಗಿಂತಲೂ ಶ್ರೇಷ್ಠರಾದ ನಾವೆಲ್ಲರೂ ಪಶುಗಳಾಗುವುದು ಹೇಗೆ ?

**ನಂದಿ:—** ಪಾಶಬದ್ಧವಾದ ಜೀವಿಯು ಪಶುವೆನ್ನಿಸುವುದು. ಅವಿದ್ಯೆಯೇ ಸಕಲಜೀವಿಗಳಿಗೂ ಮೂಲಪಾಶವಾಗಿದೆ ಅದು ಆತ್ಮನನ್ನು

ಕಟ್ಟಿಹಾಕಿರುವವರೆಗೂ ಆತ್ಮವು ಪಶುಪ್ರಾಯವೇ ಆಗಿರಬೇಕಲ್ಲವೇ ? ನೀವು ಆತ್ಮಭಾವದಲ್ಲಿ ಪಶುಗಳಾಗಿ, ಪಶುಪತಿಯನ್ನು ಆರಾಧಿಸಬೇಕೇ ಹೊರತು, ದೇಹಾಕೃತಿಯಲ್ಲಾಗಲಿ ದೇಹಗುಣದಲ್ಲಾಗಲಿ ಪಶುತ್ವವನ್ನು ಪಡೆಯಬೇಕಾಗಿಲ್ಲ. ನಾನು ಆತ್ಮತಃ 'ಪಶು' ಎಂದು ಭಾವಿಸಿಕೊಳ್ಳುವುದಕ್ಕೆ ಅರ್ಥವೇನು? ನಾನು ಅವಿದ್ಯಾಪಾಶಬದ್ಧನು, ಅಜ್ಞಾನಮಯನು, ಆನಂದ ವಿಹೀನನು, ದುರ್ಬಲನು, ದುರ್ಗುಣಿಯು, ಸಂಸಾರನಿಮಗ್ನನು—ಎಂಬ ರೀತಿಯಿಂದ ಭಾವನೆ ಹುಟ್ಟುವುದೇ 'ಪಶುಭಾವನೆ' ಎನ್ನಿಸುವುದು. ನನ್ನ ದುಸ್ಥಿತಿಯು ನನಗೆ ಮನದಟ್ಟಾದರೆ, ನಾನು ಅದರಿಂದ ಮುಕ್ತನಾಗಿ ಸಚ್ಚಿದಾನಂದ ಸ್ವರೂಪವನ್ನು ಪಡೆಯುವುದಕ್ಕಾಗಿ, ಪಶುಪತಿಯನ್ನು ಆರಾಧಿಸಲು ಪ್ರವರ್ತಿಸುತ್ತೇನೆ. ಇದೇ ಪಾಶುಪತಮತದ ಮುಖ್ಯಸಿದ್ಧಾಂತವು.

**ಜ್ಯೇ. ಅ:**— ಅಗ್ನಿಯು ಮೊದಲಿನಿಂದಲೂ 'ಪಶುಪತಿ' ಎಂದು ಪ್ರಸಿದ್ಧನಾಗಿರುವನು. ಏಕೆಂದರೆ: ಯಜ್ಞದಲ್ಲಿ ಪಶುಗಳನ್ನು ಅವನು ಆಹುತಿ ತೆಗೆದುಕೊಳ್ಳುತ್ತ ಇರುವನು ಹೀಗೆ ಬಲಿಯಾದ ಪಶುಗಳಿಗೆ ಅಗ್ನಿಯು ಸ್ವರ್ಗವನ್ನು ಅನುಗ್ರಹಿಸುತ್ತಿದ್ದನೆಂದು ಯಜ್ಞಮತವು ಹೇಳುವುದು. ನಮ್ಮ ನೂತನ ಪಶುಪತಿಯು ಸಹ ತನ್ನ ಪಶುಗಳಿಗೆ ಇದೇ ಗತಿಗಾಣಿಸುವಂತೆ ತೋರುತ್ತದೆ. ಅಗ್ನಿಯು ತನ್ನ ಪಶುಗಳ ಪ್ರಾಣವನ್ನು ಹರಣಮಾಡುತ್ತಿದ್ದನು; ಶಿವನಾದರೋ ತನ್ನ ಪಶುಗಳ ಪ್ರಾಣಕ್ಕಿಂತಲೂ ಅಮೂಲ್ಯವಾದ ಮಾನವನ್ನೇ ಹರಣಮಾಡುವನು.

**ನಂದಿ:**— ಮಾನಾಪಮಾನಗಳೆಂಬ ದ್ವಂದ್ವವನ್ನು ದಾಟದಿದ್ದರೆ ಭಕ್ತಿಯು ಸಿದ್ಧಿಸುವುದಿಲ್ಲ. ಭಕ್ತನು ಮಾನಕ್ಕೆ ಹೆದರಿದರೆ ದೇವರ ಅನುಗ್ರಹಕ್ಕೆ ಪಾತ್ರನಾಗಲಾರನು.

**ಜರ:**— ಮಾನವನ್ನು ಮಾರಿ ಪಡೆಯತಕ್ಕ ದೇವರ ಅನುಗ್ರಹದಿಂದ ನಾವು ಸಾಧಿಸುವದಾದರೂ ಏನು ?

**ನಂದಿ:**— ನಿನಗೆ ಏನು ಬೇಕೆಂದರೆ ಅದು ದೊರೆಯುವುದು.

**ಚಿತ್ರ:**— ನನಗೆ ಮಾನವೇ ಬೇಕಾಗಿದ್ದರೆ ಏನು ಮಾಡುವುದು ?

**ನಂದಿ:**— ನಿನ್ನಂತಹ ಮೂರ್ಖರು ಭಕ್ತಿಗೆ ಅನಧಿಕಾರಿಗಳೇ ಸರಿ.

**ಜರ:—** ಮಾನ ಹೋಗತಕ್ಕ ಭಕ್ತಿ ನಮಗೆ ಬೇಡ.

**ಭೃಗು:—** ವಿಷ್ಣುಭಕ್ತಿಯಲ್ಲಿ ಮಾನಾಪಹಾರವಿಲ್ಲ.

**ನಂದಿ:—** ನಿಮಗೆ ಇಷ್ಟವಿಲ್ಲದಿದ್ದರೆ ಹಿಂದಣಂತೆಯೇ ಶಿವದೂರರಾಗಿದ್ದುಕೊಂಡು ಬನ್ನಿರಿ. ಶಿವನನ್ನು ಆಶ್ರಯಿಸಬೇಕೆಂದು ನಿಮ್ಮನ್ನು ಯಾರೂ ಬಲಾತ್ಕಾರ ಪಡಿಸುತ್ತಿಲ್ಲ. ನಿಮ್ಮ ಒಡೆಯನಾದ ಇಂದ್ರನು ತಾನಾಗಿಯೇ ಮಹೇಶ್ವರನನ್ನು ಹುಡುಕಿಕೊಂಡು ಬಂದು ಶರಣಾಗತನಾಗಿರುವನು.

**ಋಭು:—** ಒಳ್ಳೆಯದು, ನಾವು ಹೀಗೆ ಮಾನಗೆಟ್ಟರೆ ನಮ್ಮ ಕಾರ್ಯಸಿದ್ಧಿಯಾದರೂ ಆಗುವುದೋ?

**ನಂದಿ:—** ಪಾಶುಪತವ್ರತದಿಂದ ದೇವತೆಗಳ ಸ್ವರೂಪವು ಮಾರ್ಪಟ್ಟು ವಿದ್ಯಾಶಕ್ತಿಯು ಗ್ರಹಣಕ್ಕೆ ಯೋಗ್ಯವಾಗುವುದೆಂದು ಶಿವನು ಅನುಗ್ರಹಿಸಿರುವನು

**ಜರ:—** ಮಾನ ಹೋದ ಮೇಲೆ ಬುದ್ಧಿ ಬರುವುದು ಸಹಜ.

**ಭೃಗು:—** ಮೊದಲೇ ಬುದ್ಧಿಯಿರತಕ್ಕವರು ಮಾನಹೋಗುವ ಕಾರ್ಯಕ್ಕೆ ಎಂದಿಗೂ ಸಮ್ಮತಿಸಿದರು.

**ನಂದಿ:—** ಪಶುತ್ವದಿಂದ ನಿಮಗೆ ಮಾನ ಹೇಗೆ ಹೋಗುವುದು?

**ಜರ:—** ದೇವಾಸುರ ಮಾನವರು ಪಶುಗಳಂತೆ ನಗ್ನರಾಗಿ, ಸಿಕ್ಕಿದ ಕಡೆಗೆ ಮಲಮೂತ್ರಗಳನ್ನು ವಿಸರ್ಜಿಸಿ, ತಾಯಿಮಗನ ಲೆಕ್ಕವಿಲ್ಲದೆ ಸಂಗಮಿಸಿದರೆ ಮಾನವನ್ನು ಕಳೆದು ಕೊಳ್ಳುವರು. ಪಶುವರ್ತನೆಯೇ ಅಪಮಾನವು; ತನ್ನಿವಾರಣೆಯೇ ಮಾನವು.

**ನಂದಿ:—** ನಿಮ್ಮನ್ನು ದೇಹರೂಪದಲ್ಲೂ ದೇಹಗುಣಗಳಲ್ಲೂ ಪಶುಗಳಾಗುವಂತೆ ಯಾರೂ ಹೇಳುವುದಿಲ್ಲವಷ್ಟೆ.

**ಭೃಗು:—** ದೇಹವು ಪಶುವಿನಂತೆ ವರ್ತಿಸಿದರೆ ದೇಹಕ್ಕೆ ಅಪಮಾನವಾಗುವುದು; ಆತ್ಮವು ಪಶುವಿನಂತೆ ವರ್ತಿಸಿದರೆ ಆತ್ಮಕ್ಕೆ ಅಪಮಾನವಾಗುವದು. ನೀನು ಹೇಳುವಂತೆ ದೇಹಾತ್ಮಗಳನ್ನು ಭಿನ್ನಮಾಡುವುದು ಸಾಧ್ಯವೂ ಅಲ್ಲ, ಯೋಗ್ಯವೂ ಅಲ್ಲ.

**ಜರ:**—ದೇವನು ನಷ್ಟವಾಗಿ ಜೀವಿಸುವ ಆತ್ಮವು ಪಿಶಾಚವೆನ್ನಿಸುವುದು. ಪಿಶಾಚಪತಿಯಾದ ಶಿವನು 'ಪಶು' ಎಂಬ ಹೆಸರಿನಿಂದ ದೇವತೆಗಳನ್ನು ವಂಚಿಸಿ, ಪಿಶಾಚರೂಪಕ್ಕೆ ತಿರುಗಿಸಲು ಬಗೆದಿರುವನೇನು ?

**ಭೃಗು:**— ಪಿಶಾಚಪತಿಯು ಭಯಂಕರವಾದ ಪಿಶಾಚರೂಪವನ್ನು ಧರಿಸಿದ್ದನು. ಈಗ ಪಶುಪತಿಯು ಪಶುರೂಪವನ್ನು ಕೈಕೊಂಡಿರುವನೋ ?

**ನಂದಿ:**— ಪಶುತ್ವಕ್ಕೆ ಮುಖ್ಯಚಿಹ್ನವಾದ ಲಿಂಗರೂಪದಿಂದ ಪಶುಪತಿಯು ಭಕ್ತರಿಗೆ ಗೋಚರನಾಗುವನು.

**ಜರ:**— ಹಾಗಾದರೆ ನಾವೆಲ್ಲರೂ ಇವನ ಲಿಂಗವನ್ನು ಪೂಜಿಸಬೇಕೋ ?

**ನಂದಿ:**— ಅಹುದು, ಅದರಲ್ಲಿ ತಪ್ಪೇನು ? ಸೃಷ್ಟಿಯ ಮೂಲಸ್ಥಾನವಾದ ಲಿಂಗವನ್ನು ಪೂಜಿಸುವುದು ಅವಗುಣವೇ ?

**ಭೃಗು:**— ಲಿಂಗವು ಅಪಮಾನದ ಮೂಲಸ್ಥಾನವು. ಲಿಂಗಪೂಜೆಯು ಅಪಮಾನದ ಪರಾಕಾಷ್ಟೆಯು.

**ಕಾಮ:**—ಲಿಂಗವು ಕಾಮದ ಕರಣವೇ ಹೊರತಾಗಿ ಸೃಷ್ಟಿಯ ಮೂಲಸ್ಥಾನವಲ್ಲ. ಮೈಥುನಸೃಷ್ಟಿಯು ಮುಖ್ಯವಾಗಿ ಮನುಷ್ಯರಲ್ಲೂ ಪಶುಗಳಲ್ಲೂ ಮಾತ್ರ ಪ್ರಚಾರದಲ್ಲಿದೆ. ದೇವತೆಗಳಲ್ಲಿ ಸಂತತಿಯು— ಬಹುವಾಗಿ ಮೈಥುನವಿಲ್ಲದೆ ನಡೆಯುತ್ತದೆ. ಕ್ರಿಮಿಕೀಟಾದಿಲಕ್ಷಾಂತರ ಜೀವವರ್ಗಗಳಲ್ಲಿ ಅಲಿಂಗಸೃಷ್ಟಿಯು ಪ್ರಚಾರದಲ್ಲಿದೆ. ಲೋಕದಲ್ಲಿ ಮಿಥುನಸೃಷ್ಟಿಯನ್ನು ದಕ್ಷನು ಮೊದಲು ಏರ್ಪಡಿಸಿದನು. ಅದಕ್ಕೆ ಮೊದಲು ಸೃಷ್ಟಿ ಇಲ್ಲದೆ ಇರಲಿಲ್ಲ. ಲಿಂಗವಿಲ್ಲದೆ ಸೃಷ್ಟಿನಡೆಯಬಹುದಾದರೂ ಕಾಮೋಪಭೋಗವು ಮಾತ್ರ ನಡೆಯಲಾರದು. ಆದರೆ ಅದು ಕಾಮಕ್ಕೆ ಮೂಲಸ್ಥಾನವಲ್ಲ. ಕಾಮವು ನನ್ನ ಉದ್ಯಮದಿಂದ ಮನಸ್ಸಿನಲ್ಲಿ ಹುಟ್ಟುವುದು; ಲಿಂಗವು ಅದನ್ನು ತೃಪ್ತಿಪಡಿಸತಕ್ಕ ಇಂದ್ರಿಯಮಾತ್ರವಾಗಿದೆ. ಈ ಇಂದ್ರಿಯವನ್ನು ಪೂಜಿಸುವುದಕ್ಕಿಂತಲೂ ಕಾಮಕ್ಕೆ ಮೂಲಕರ್ತನಾದ ನನ್ನನ್ನು ಪೂಜಿಸುವುದು ಮೇಲಲ್ಲವೇ ? ನನ್ನ ಸಾಧನವಾಗಿರುವ ಈ ಇಂದ್ರಿಯವನ್ನು ತನ್ನ

ಸರ್ವಸ್ವವನ್ನಾಗಿ ಮಾಡಿಕೊಳ್ಳುವ ಸಲುವಾಗಿ, ಹಿಂದೆ ಶಿವನು ನನ್ನೊಡನೆ ಕಲಹಮಾಡಿ ಅರೆವೆಣ್ಣಾದನು.

**ಜರ:**-- ಇವನು ತನ್ನ ಲಿಂಗಕ್ಕೆ ಪೂಜೆಯನ್ನು ಬಯಸಿದರೆ, ಇವನ ಅರ್ಧಾಂಗಿಯಾದ ಶಕ್ತಿಯು ತನ್ನ ಯೋನಿಗೆ ಪೂಜೆಯನ್ನು ಬಯಸದೆ ಬಿಡಳು !

**ಖುಭು:**— ಶಿಶ್ನವನ್ನು ದೇವರೆಂದು ಭಾವಿಸುತ್ತಿದ್ದವರನ್ನು ಕಟ್ಟುಗ್ರವಾಗಿ ಶಿಕ್ಷಿಸುತ್ತಿದ್ದ ಇಂದ್ರನು, ತಾನೇ ಶಿಶ್ನಾರಾಧಕನಾಗಿ ಪರಿಣಮಿಸಬೇಕಾದರೆ ವಿಧಿವಿಲಾಸವನ್ನು ಏನೆಂದು ಹೇಳಬೇಕು ?

**ವಿಶ್ವಾ:**— ಶಿವನ ಲಿಂಗವನ್ನು ಪೂಜಿಸುವುದಕ್ಕೆ ಪ್ರತಿಯಾಗಿ ಅಸುರರಿಂದ ಹತರಾಗುವುದು ಮೇಲು.

**ನಂದಿ:**-- ಪರಮಪೂಜ್ಯವಾದ ಲಿಂಗರಹಸ್ಯವನ್ನರಿಯಲು ನೀವಾರೂ ಅಧಿಕಾರಿಗಳಲ್ಲ.

**ಜರ:**-- ಸದ್ಯಕ್ಕೆ ನಮಗೆ ಅಂತಹ ಯೋಗ್ಯತೆಯನ್ನು, ನೀನೂ ನಿನ್ನ ಒಡೆಯನೂ ಅನುಗ್ರಹಿಸಬೇಡಿರೆಂದು ನಿಮಗೆ ನಾನು ಮೊರೆಯಿಡುತ್ತೇನೆ. ಲೋಕದಲ್ಲಿ ಸದ್ಗುಣ, ಮಾನ, ನಾಚಿಕೆ, ಹೇಸಿಗೆ, ವಿವೇಕ, ಆತ್ಮಗೌರವ ಇವು ಲವಲೇಶವಿದ್ದರೂ ಈ ಕ್ಷುದ್ರಮತವು ಹರಡಲಾರದು.

**ಚಿತ್ರ:**-- ನಂದಿಯೇ, ನಿನ್ನ ವಿಚಿತ್ರಮತದ ಭಕ್ತರು ಆತ್ಮತಃ ಪಶುವಾದರೆ ಸಾಕೆಂದು ಹೇಳಿದೆ. ಆದರೆ ಪಶುಪತಿಯು ಮಾತ್ರ ಪಶುತ್ವಚಿಹ್ನವಾದ ಲಿಂಗದ ರೂಪವನ್ನು ದೇಹತಃ ಏಕೆ ಅಂಗೀಕರಿಸುವನು ?

**ನಂದಿ:**--ಆ ರಹಸ್ಯವನ್ನು ನಿನ್ನಂತಹ ಮೂಢನು ಅರಿಯಲಾರನು.

**ಜ್ಯೇ. ಅ.:**— ಅದನ್ನು ಇಂದ್ರಾದಿಗಳು ಮನಗಂಡರೋ ?

**ನಂದಿ:**-- ಕೈಲಾಸದಲ್ಲಿ ಇಂದ್ರನು ಅದನ್ನು ವಿವರಿಸಿ, ಎಲ್ಲರನ್ನೂ ಪಾಶುಪತರನ್ನಾಗಿ ಮಾಡಿಸುವುದಾಗಿ ನಂಬಿಕೆ ಹೇಳಿ, ಇಂದ್ರನನ್ನು ಕರೆದುಕೊಂಡು ಹೋದನು. ಅವರು ಹಾಗೆ ಮಾಡಿದರೆ, ದೇವತೆಗಳು ವಿದ್ಯಾಶಕ್ತಿಗೆ ಅಧಿಕಾರಿಗಳಾಗುವರೆಂದು ಶಿವನು ಅಪ್ಪಣೆ ಕೊಟ್ಟನು.

**ಭೃಗು:**-- ಈ ಭಯಂಕರವಾದ ಮತವು ಎಂತಹ ತಾಮಸ ಜೀವಿಯ ಮನಸ್ಸನ್ನಾದರೂ ಅಲ್ಲೋಲಕಲ್ಲೋಲವಾಗಿ ಕಲಕುವುದು. ಇದು ಸುಪ್ತವಾಗಿರುವ ದೇವತೆಗಳ ಬುದ್ಧಿಯನ್ನು ಎಬ್ಬಿಸುವುದರಲ್ಲಿ ಸಂಶಯವಿಲ್ಲ. ಬೃಹಸ್ಪತಿಯು ಈ ವ್ರತಾಚರಣೆಯ ನೆಪದಿಂದ ದೇವತೆಗಳ ಬುದ್ಧಿಯನ್ನು ಉದ್ರೇಕಿಸಿ, ಬ್ರಹ್ಮನು ಹೇಳಿದ ವಿಶ್ವರಥವನ್ನು ನಿರ್ಮಿಸಲು ತೊಡಗಿರಬೇಕು. ನೀವೆಲ್ಲರೂ ಇಲ್ಲಿ ವ್ಯರ್ಥಾಲಾಪಮಾಡುತ್ತಿರುವುದಕ್ಕಿಂತಲೂ ಈ ಕಾರ್ಯದಲ್ಲಿ ಬೃಹಸ್ಪತಿಯ ಆಜ್ಞಾನುವರ್ತಿಗಳಾಗುವುದು ಉತ್ತಮ.

**ಖುಂಭು:**-- ಹಾಗೆಯೇ ಮಾಡುತ್ತೇವೆ. ನಾವು ಈಗಲೇ ಹೊರಡೋಣ.

**ಕಾಮ:**-- ನಂದಿಯೇ ಈ ವಿಶ್ವರಥಕ್ಕೆ ನಿನ್ನ ಒಡೆಯನೇ ರಥಿಕನೋ ?

**ನಂದಿ:**-- ಅಹುದು ! ಈ ರಥವನ್ನೇರಿ ಶಿವನು ತ್ರಿಪುರಗಳನ್ನು ಮುತ್ತಿ, ಅತ್ಯುಗ್ರವಾದ ಪಾಶುಪತಾಸ್ತ್ರದಿಂದ ದಹಿಸಿಬಿಡಲು ಸಂಕಲ್ಪಿಸಿರುವನು.

**ಭೃಗು:**-- ಈ ಕಾರ್ಯಕ್ಕೂ ಇವನು ಲಿಂಗರೂಪದಿಂದಲೇ ಹೊರಡಬೇಕೆಂದಿರುತ್ತಾನೆಯೋ ?

**ನಂದಿ:**-- ನಿಮ್ಮಂತಹ ಮೂರ್ಖರೊಡನೆ ಮಾತನಾಡಿ ಫಲವಿಲ್ಲ.

( ಹೋಗುವನು. )

**ಭೃಗು:**-- ನಾನು ಬಯಸಿದ್ದ ಸದ್ಗುಣಾತ್ಮಕ—ಮಾನವೋತ್ಕರ್ಷ ಮತದ ವಿಜಯಕ್ಕೆ ಪ್ರಬಲವಾದ ವಿಘ್ನವು ಹುಟ್ಟಿತು. ಇನ್ನು ಸಾವಿರಾರು ವರ್ಷಗಳ ವರೆಗೆ ಅದನ್ನು ಯಾರೂ ಪುರಸ್ಕರಿಸರು. ಸುಮ್ಮನೆ ಚಿಂತಿಸಿ ಫಲವಿಲ್ಲ. ನಡೆಯಿರಿ ಹೋಗೋಣ !

( ಹೋಗುವರು. )

---

## ಷಷ್ಠ ಚಿತ್ರ

**ಸ್ಥಳ**— ಅಸುರರಾಜ್ಯದಲ್ಲಿ ಸ್ವರ್ಣನಗರಿಯ ಒಂದು ಮಂತ್ರಾಗಾರ. ಮಧ್ಯದಲ್ಲಿ ನಾಲ್ಕು ಉನ್ನತಾಸನಗಳು ಸಿದ್ಧವಾಗಿವೆ. ಮುಂಭಾಗದಲ್ಲಿ ಮಯ, ಸುಗ್ರೀವ, ಹಸ್ತಿ, ಕರಾಳ ಇವರು ಮಾತನಾಡುತ್ತಿರುವರು.

**ಮಯ:**— ನಗರದಲ್ಲಿ ಯಾರ ಮುಖದಲ್ಲೂ ಕಾಂತಿಯೇ ಇಲ್ಲ. ಎಲ್ಲಿಗೆ ಹೋದರೂ ಇದೇ ಮಾತು. ಅಸುರ ರಾಜ್ಯಲಕ್ಷ್ಮಿಯು ನಮ್ಮನ್ನು ತ್ಯಜಿಸಿಬಿಟ್ಟಳೆಂದು, ಸಕಲರೂ ಭಯ-ಶೋಕವಿಹ್ವಲರಾಗಿದ್ದಾರೆ. ನಮ್ಮ ರಾಜಕುಮಾರರು ಬ್ರಹ್ಮನಿಂದ ವರಗಳನ್ನು ಪಡೆದುಬಂದ ಮೇಲೆ, ಇದುವರೆಗೂ ನಮ್ಮ ಗುರುಗಳಾದ ಶುಕ್ರಾಚಾರ್ಯರು, ಸರ್ವಸ್ವತಂತ್ರದಿಂದ ಹೊಸಸಾಮ್ರಾಜ್ಯವನ್ನು ಸ್ಥಾಪಿಸಿ ಆಳುತ್ತಾ ಬಂದರು. ನಮ್ಮ ರಾಜಕುಮಾರರು ಸಚಿವಾಯತ್ತಪ್ರಭುತ್ವಕ್ಕೆ ಮಾತ್ರ ಅರ್ಹರಾದ್ದರಿಂದ ಗುರುಗಳ ಕೃಪೆಯಿಂದ ರಾಜ್ಯಭಾರಕಾರ್ಯವನ್ನು ನಿರ್ವಹಿಸಿ, ಅಸುರರಿಗೆ ತ್ರಿಲೋಕಾಧಿಪತ್ಯವನ್ನು ಕೊಡಿಸಿದ್ದರು. ಅವರು ಈಗ ಏಕಾಏಕಿ ಮಂತ್ರಿಪದವಿಯನ್ನು ಪರಿತ್ಯಾಗಮಾಡಿದರೆಂದರೆ ಅಸುರಲೋಕದ ಗತಿಯೇನಾಗಬೇಕು ?

**ಹಸ್ತಿ:**— ನಮ್ಮ ಮಹಾರಾಜನೇ ಅವರನ್ನು ಕೆಲಸದಿಂದ ತಪ್ಪಿಸಿದನೆಂದು ಕೇಳಿದೆನು.

**ಸುಗ್ರೀವ:**— ಕಾರಣವು ಏನಾಗಿದ್ದರೂ ಪರಿಣಾಮವು ಮಾತ್ರ ಭಯಂಕರವಾದುದು.

**ಹಸ್ತಿ:**—ಈಚೆಗೆ ಸ್ವಲ್ಪಕಾಲದಿಂದಲೂ, ಮಹಾರಾಜನಿಗೂ ಗುರುಗಳಿಗೂ ಅಂತಃಶುದ್ಧಿ ಚೆನ್ನಾಗಿರಲಿಲ್ಲ. ಎಷ್ಟಾದರೂ ಮಂತ್ರಿಯು

ರಾಜನಿಗೆ ತಗ್ಗಿ ನಡೆಯಬೇಕು. ಗುರುಗಳು ರಾಜನನ್ನು ಮರದಬೊಂಬೆ ಯಂತೆ ಮಾಡಿಟ್ಟು, ಅವನ ಮೇಲೆ ಮನಸ್ಸಿ ಅಧಿಕಾರಮಾಡತೊಡಗಿ ದರೆ, ಮಾನಿಷ್ಠನಾದ ಮಹಾರಾಜನು ಎಷ್ಟು ದಿವಸ ಸಹಿಸಲಾಪನು ?

**ಸುಗ್ರೀವ:—** ಗುರುಗಳ ನೀತಿಯು ಹಿಂದಿನಂತೆ ಜಯಪ್ರದವಾ ಗದೆ ಭಂಗಪಡುತ್ತ ಬರುತ್ತಿತ್ತು. ಅದಕ್ಕೆ ಗುರುಗಳು ಎಷ್ಟುಮಾತ್ರವೂ ಕಾರಣರಲ್ಲ. ನಮ್ಮ ರಾಜಪುತ್ರರ ಅವಿವೇಕವು ಅಸುರಕ್ಷೈಣ್ಯವನ್ನು ಹುಟ್ಟಿಸಿದೆ. ಈಗಲೂ ಅವರು ಎಚ್ಚೆತ್ತು ಶುಕ್ರಾಚಾರ್ಯರಿಗೆ ವಿಧೇಯ ರಾಗಿ ನಡೆದುಕೊಂಡರೆ, ನಮ್ಮ ಕ್ಷೀಣತೆಯು ಪರಿಹಾರವಾಗಬಲ್ಲುದು. ರಾಜಪುತ್ರರ ಅವಿವೇಕಕ್ಕೂ ಅವಿಧೇಯತೆಗೂ ಪರಸ್ಪರ ವೈಮನಸ್ಯಕ್ಕೂ ಹೇಸಿ, ಗುರುಗಳು ಮಂತ್ರಿಪದವಿಯನ್ನು ಬಿಟ್ಟು, ಪ್ರಯಾಣಸನ್ನದ್ಧರಾಗಿ ರುವರು. ಇಂದು ಮೂವರು ರಾಜಪುತ್ರರೂ ಇಲ್ಲಿ ಮಂತ್ರಾಲೋಚ ನೆಗೆ ಸೇರುವರು ಕಮಲಲೋಚನನೂ ವಿದ್ಯುನ್ಮಾಲಿಯೂ ಮಹಾ ರಾಜನ ಆಜ್ಞೆಯಿಂದ ಇಲ್ಲಿಗೆ ಈಗ ಬರುವರು. ಅವರ ಸಮಾಗಮದಿಂದ ಪರಸ್ಪರ ಸೌಹಾರ್ದವು ಹೆಚ್ಚುವುದೋ ಕುಗ್ಗುವುದೋ ತಿಳಿಯದು· ಗುರುಗಳೂ ಒಂದು ಅವರನ್ನು ಸಂಧಿಸುವುದಾಗಿ ಹೇಳಿರುವರು. ಗುರು ಗಳು ನಮ್ಮ ರಾಜ್ಯವನ್ನು ಬಿಟ್ಟರೆ, ಅದು ಇನ್ನರೆಗಳಿಗೆಯೂ ಜೀವಿಸ ಲಾರದು.

**ಕರಾಳ:—** ಅವರು ಇದ್ದಮಾತ್ರಕ್ಕೆ ನಮ್ಮ ಭಯವು ಪರಿಹಾರ ವಾಗುವುದೋ? ಮನುಷ್ಯರನ್ನು ಮಾಡಿದಂತೆಯೇ ದೇವತೆಗಳನ್ನೂ ನಮ್ಮ ಜೀತಪಶುಗಳನ್ನಾಗಿ ಮಾಡಬೇಕೆಂದು ನಾವೆಲ್ಲರೂ ಪರಿಪರಿಯಾಗಿ ನೊರೆಯಿಟ್ಟರೂ, ಗುರುಗಳು ತಮ್ಮ ಜನ್ಮಾಭಿಮಾನದಿಂದ ಅದಕ್ಕೆ ಒಪ್ಪದೆ ದೇವತೆಗಳನ್ನು ಅಸುರಸಾಮಂತರನ್ನಾಗಿ ಮಾಡಿಟ್ಟರು. ಈ ಖಳರು ಈಗ ಬೃಹಸ್ಪತಿಯ ನೇತೃತ್ವದಲ್ಲಿ ಶಿವನನ್ನೂ ಬ್ರಹ್ಮನನ್ನೂ ತಮ್ಮ ಕಡೆಗೆಳೆದುಕೊಂಡು, ವಿಶ್ವರಥವೆಂಬ ಅತ್ಯದ್ಭುತಯಂತ್ರಸಾಧನವನ್ನು ರಚಿಸಿ, ನಮ್ಮ ರಾಜ್ಯವನ್ನು ಮುತ್ತಿಗೆ ಹಾಕಿ ಯುದ್ಧಮಾಡುತ್ತಿರುವರು. ನಮ್ಮ ಶತ್ರುಗಳು ಬಹಿರಂಗವಾಗಿ ಇಷ್ಟು ಸನ್ನಾಹಗಳನ್ನು ಮಾಡಿ ಕೊಳ್ಳುತ್ತಿದ್ದರೂ ಶುಕ್ರಾಚಾರ್ಯರು ಔದಾಸೀನ್ಯ ಮಾಡಿದರು. ಇವರು

ಸ್ವತಃ ದೇವಕೂಟಕ್ಕೆ ಸೇರಿ, ಸೂರ್ಯನ ಸಾಮಂತರಾಗಿ, ಒಂದು ಗ್ರಹ ರಾಜ್ಯಕ್ಕೆ ರಾಜರಾಗಿರುವರು. ಮತದಲ್ಲಿ ಬ್ರಾಹ್ಮಣರಾಗಿ, ಬ್ರಹ್ಮಾನುವರ್ತಿಗಳಾಗಿರುವರು. ವಿಷ್ಣುವು ಇವರ ಸಹೋದರಿಯ ಪತಿಯಾದ್ದರಿಂದ, ಅವನು ಯಾವಾಗ ಬೇಕಾದರೂ ಇವರನ್ನು ತನ್ನ ಕಡೆಗೆ ಎಳೆದುಕೊಳ್ಳಬಲ್ಲನು. ಶಿವನಿಗೂ ಅಂಧಕಾಸುರನಿಗೂ ಯುದ್ಧವಾದಾಗ, ಇವರು ಅಕಸ್ಮಾತ್ತಾಗಿ ಶಿವನಿಗೆ ಸೆರೆಸಿಕ್ಕಲು, ಇವರು ಹೆದರಿಕೆಯಿಂದ ಆತನ ಶುಕ್ರಸ್ಥಾನವನ್ನು ಪೂಜಿಸುವುದಕ್ಕೆ ಒಪ್ಪಿ, ಶಿವನಕಡೆಗೆ ಸೇರಿಕೊಂಡರು. ಶಿವನ ಶುಕ್ರಸ್ಥಾನದಿಂದ ಬಿಡುಗಡೆಹೊಂದಿದವರಾದ್ದರಿಂದ ತಾವು ಶುಕ್ರನೆಂದು ಹೆಸರಿಟ್ಟುಕೊಂಡು, ಶಿವಪುತ್ರನೆಂದು ಕರೆದುಕೊಂಡರು. ಹಿಂದೆ ಇವರು, ಅಗ್ನಿಯನ್ನು ಯಜ್ಞದ ಹೋತಾರನನ್ನಾಗಿ ಮಾಡಿಸಲು ಸಾಹಸಪಟ್ಟು ಅವನ ಪಕ್ಷದಲ್ಲಿದ್ದರು. ಅನಂತರ ಇಂದ್ರನನ್ನಾಶ್ರಯಿಸಿ, ಜಂಭಾಸುರನನ್ನು ಕೊಲ್ಲಿಸಲು ಸಹಾಯಕರಾದರಲ್ಲದೆ, ವೃತ್ರವಧೆಗೆ ವಜ್ರಾಯುಧವನ್ನು ಮಾಡಿಕೊಳ್ಳಲು ಅವನಿಗೆ ಸಹಾಯ ಮಾಡಿದರು. ಇಂತಹ ಪುರುಷನ ಕೈಗೆ ನಮ್ಮ ಅಸುರಕುಲದ ಸರ್ವಸ್ವವನ್ನೂ ಒಪ್ಪಿಸಿದ್ದು ರಾಜನೀತಿಯೇ? ಹಾಗೆ ಮಾಡಿದುದರ ಫಲವನ್ನು ನಾವು ಈಗ ಅನುಭವಿಸಬೇಕಾಗಿದೆ.

**ಮಯ:**— ನಮ್ಮ ಗುರುಗಳಲ್ಲಿ ಯಾವ ತಪ್ಪಿದ್ದರೂ ಅಸುರ-ದ್ರೋಹವನ್ನು ಮಾತ್ರ ಆರೋಪಿಸಲಾಗುವುದಿಲ್ಲ. ಎಂತಹ ಮಹಾಪುರುಷನಿಗೂ ಜಯಾಪಜಯಗಳು ಕಾಲಾಧೀನವಾಗಿ ಪ್ರಾಪ್ತವಾಗುವುವು. ಯಾರಿಗೂ ಶಾಶ್ವತವಾಗಿ ಜಯವೇ ಲಭಿಸಲಾರದು ನಮ್ಮ ಗುರುಗಳ ರಾಜನೀತಿಗೆ ಈಗ ಸ್ವಲ್ಪ ಮಾಲಿನ್ಯವು ಬಂದ ಮಾತ್ರಕ್ಕೆ, ನೀವು ಅವರನ್ನು ದ್ರೋಹಿಗಳೆಂದು ಅಪಲಪಿಸುವುದು, ಅತಿನೀಚ-ಕೃತಘ್ನತೆಯಲ್ಲವೇ? ಈ ಮಾಲಿನ್ಯಕ್ಕೆ ಇತರರು ಕಾರಣರಾಗಿರುವಾಗ ಗುರುಗಳನ್ನು ನಿಂದಿಸುವುದು ನೀತಿಯೇ?

**ಸುಗ್ರೀವ:**—ನಮ್ಮ ಕ್ಷೀಣತೆಯ ಕಾರಣಕರ್ತರನ್ನೂ ಇತಿಹಾಸವನ್ನೂ ಗೊತ್ತುಹಚ್ಚುವುದರಿಂದ ಈಗ ಲಾಭವೇನು? ಮನೆಯಮುಂದೆ

ಶತ್ರುವು ಸಶಸ್ತ್ರನಾಗಿ ಕುಳಿತು ನಮ್ಮನ್ನು ಕೊಲ್ಲುತ್ತಿರುವನು. ಅವನನ್ನು ಓಡಿಸುವುದು ಹೇಗೆ? ಅದನ್ನು ಯೋಚಿಸಿ.

**ಕರಾಳ:—** ಅವನನ್ನು ಮನೆಯಮುಂದಕ್ಕೆ ಕರೆತರಿದವರಾರು? ಇಷ್ಟುದೂರ ಪ್ರಬಲಿಸಲು ಅವಕಾಶಕೊಟ್ಟವರಾರು? ಮನೆಯಮುಂದೆ ಕುಳಿತವನನ್ನು ಓಡಿಸಲು ಪ್ರಯತ್ನವನ್ನೇ ಮಾಡದೆ ಸಂಚು ನಡೆಯಿಸುತ್ತಿರುವವರಾರು? ಇಷ್ಟಕ್ಕೂ ಈ ಶುಕ್ರಾಚಾರ್ಯರಲ್ಲವೇ ಕಾರಣರು? ಇಂತಹ ದ್ರೋಹಿಯೂ ದುರ್ಬಲನೂ ಆದ ಮಂತ್ರಿಯನ್ನು ಓಡಿಸದೆ ಇದ್ದರೆ ನಾವು ಕಳೆದುಳಿಯಲಾದೀತೇ? ಕಡೆಗೆ ರಾಜನು ಇವರನ್ನು ಕೆಲಸದಿಂದ ತಪ್ಪಿಸಿದರೆ, ಈ ಮಯನಂತಹ ಮುದಿಪಶುಗಳು ಹೇಗಾದರೂ ಮಾಡಿ ಪುನಃ ಅವರೇ ಮಂತ್ರಿಗಳಾಗಬೇಕೆಂದು ಕನವರಿಸಿದರೆ ನಮ್ಮ ಗತಿಯೇನಾಗಬೇಕು?

**ಮಯ:—** ಶತ್ರುವೃದ್ಧಿಯನ್ನು ಗುರುಗಳು ಎಂದೂ ಉಪೇಕ್ಷೆ ಮಾಡಲಿಲ್ಲ.

**ಹಸ್ತಿ:—** ಹಾಗಾದರೆ ಅದನ್ನು ಚಿಗುಟಲು ಅವರು ಮಾಡಿದಾದರೂ ಏನು? ದೇವತೆಗಳು ಶಿವದಾಸ್ಯದಿಂದ ಪಶುಪ್ರಾಯರಾಗುತ್ತಿದ್ದ ತರುಣದಲ್ಲಿ, ನಮ್ಮ ಗುರುಗಳು ಸೇನೆಯನ್ನು ಕಳುಹಿಸಿ, ದೇವತೆಗಳ ಗೋಧನವನ್ನೂ ವನಸ್ಪತಿಧನವನ್ನೂ ಅಪಹರಿಸಿ, ನಮ್ಮ ನಗರಗಳಿಗೆ ತರಿಸಿದರು. ಇದರಿಂದ ನಮಗೆ ಲಾಭವೇನಾಯಿತು?

**ಮಯ:—** ಅದರ ರಹಸ್ಯವನ್ನು ಹೇಳುತ್ತೇನೆ ಕೇಳು. ಬೃಹಸ್ಪತಿಯು ಅನ್ನಾಹಾರವಿಲ್ಲದೆ ಕಂಗೆಟ್ಟಿದ್ದ ದೇವತೆಗಳಿಗೆ ವಾರ್ತಾಮಾರ್ಗವನ್ನು ಕಲಿಸಿ, ಪಾಶುಪಾಲ್ಯದಿಂದ ಜೀವಿಸುವಂತೆ ಏರ್ಪಡಿಸಿದನು. ಈ ಪಶುಗಳು, ಸಹಜವಾಗಿ ಬೆಳೆಯುತ್ತಿದ್ದ ಓಷಧಿಗಳನ್ನು ತಿಂದು ಜೀವಿಸುತ್ತಿದ್ದುವು. ನಮ್ಮ ಗುರುಗಳು ಈ ಓಷಧೀಜಾತಿಗಳನ್ನೂ ಪಶುಗಳನ್ನೂ ಅಪಹರಿಸಿ, ದೇವತೆಗಳ ಹೊಸ ವೃತ್ತಿಯನ್ನು ನಾಶಪಡಿಸಲು ಬಗೆದರು.

**ಕರಾಳ:—** ಅದರಿಂದ ದೇವತೆಗಳು ಸತ್ತು ಹೋದರೋ?

**ಮಯ:—** ನೀನು ಗುರುಗಳು ಹೇಳಿದಂತೆ ಕೆಲಸ ಮಾಡಿದ್ದರೆ

ಹಾಗೆಯೇ ನಡೆಯುತ್ತಿತ್ತು. ಈ ಕೆಲಸಕ್ಕೆ ನಿನ್ನನ್ನು ನಿಯಮಿಸಿದುದು ತಪ್ಪಾಯಿತು.

**ಕರಾಳ:**— ಅದು ಅಸೂಯೆಯ ಮಾತು ನನ್ನ ಪ್ರತಾಪವನ್ನು ನೀವು ಇಲ್ಲಿ ಗೌರವಿಸದಿದ್ದರೂ ದೇವತೆಗಳು ಮಾತ್ರ ಹಾಗೆ ಮಾಡ ಲಾರರು. ನಾನು ಸೇನಾಸಮೇತನಾಗಿ ಅವರನ್ನು ಸಮೀಪಿಸಿದೊಡನೆ ಇಂದ್ರ ಬೃಹಸ್ಪತಿ ಮೊದಲಾದ ಮುಖ್ಯರೆಲ್ಲರೂ ಕಾಣಿಕೆ ಸಹಿತ ಬಂದು, ನನಗೆ ಅಡ್ಡ ಬಿದ್ದು ಅಂಜಲಿಬದ್ಧರಾಗಿ ನಿಂತು, ನನ್ನ ಬಾಯಿಂದ ಬರು ವುದೇ ತಡ, ಓಷಧಿಗಳನ್ನೂ ಗೋವುಗಳನ್ನೂ ನಾನು ತೆಗೆದುಕೊಂಡು ಹೋಗಲು ಒಪ್ಪಿಕೊಂಡರು.

**ಮಯ:**— ನಿಜ, ಆದರೆ ಅವರ ನಯಕ್ಕೆ ಮರುಳಾಗಿ, ಅವನು ಬೇಡಿಕೊಂಡ ಪ್ರಕಾರ ವೃಷಭಜಾತಿಯೊಂದನ್ನು ಮಾತ್ರ ನೀನು ಅವರಿಗೆ ಉಳುಹಿಸಿಕೊಟ್ಟೆ. ದೇವಗುರುವು ಅದರ ಸಹಾಯದಿಂದ ಕೃಷಿವೃತ್ತಿ ಯನ್ನು ಸ್ಥಾಪನೆ ಮಾಡಿ ದೇವತೆಗಳಿಗೆ ಆಹಾರವನ್ನು ಒದಗಿಸಿದನು. ಸಹಜವಾಗಿ ಬೆಳೆಯುತ್ತ, ಆಹಾರವಾಗಿಯೂ ಔಷಧವಾಗಿಯೂ ಉಪ ಯೋಗಕ್ಕೆ ಬರುತ್ತಿದ್ದ ವನಸ್ಪತಿಗಳು ಹೋದರೂ ಕೃಷಿಪ್ರಯತ್ನದಿಂದ ದೇವಗುರುವು ಆಹಾರವನ್ನು ಬೆಳೆಯಲಾರಂಭಿಸಿದನು.

**ಹಸ್ತಿ:**— ಆದರೆ ಕರಾಳನ ವಿಜಯದಿಂದ ನಮಗೆ ಅತ್ಯಂತ ರುಚಿ ಕರವಾದ ಗೋಮಾಂಸವು ಪುಷ್ಕಲವಾಗಿ ದೊರೆಯಲಾರಂಭಿಸಿತು. ಓಷಧಿ ಗಳಿಂದ ನಮ್ಮ ವೈದ್ಯಾಲಯಗಳು ಮೃತಸಂಜೀವಿನೀರಸವನ್ನು ರಚಿಸಿ, ಒಂದು ಅಖಂಡವಾಪಿಯಲ್ಲಿ ಶೇಖರಿಸುತ್ತಾ ಬಂದುವು. ಈ ಅಮೃತ ವಾಪಿಯ ಸಹಾಯದಿಂದ ನಮ್ಮ ರಾಜ್ಯದಲ್ಲಿ ರೋಗವೂ ಮರಣವೂ ಮಾಯವಾದುವು.

**ಕರಾಳ:**— ದೇವತೆಗಳು ಕೃಷಿವೃತ್ತಿಯನ್ನು ಅವಲಂಬಿಸಿದ ಮಾತ್ರ ದಿಂದ ನಮಗೆ ಆದ ನಷ್ಟವೇನು? ಅದರಿಂದ ಅಪಾಯವಿದ್ದರೆ, ಗುರುಗಳು ಒಬ್ಬ ಯಃಕಶ್ಚಿತ್ ಸೇನಾನಿಯನ್ನು ಕಳಿಸಿದ್ದರೂ ಅವನು ದೇವತೆಗಳ ಕೃಷಿಕಾರ್ಯಕ್ಕೆ ಮಣ್ಣುಹಾಕುತ್ತಿದ್ದನು

**ಹಸ್ತಿ:**— ನಮ್ಮ ಅಪಾಯಕ್ಕೆ ಕಾರಣವಾದುದು ದೇವತೆಗಳ

ವಿಶ್ವರಥವೇ ಹೊರತು ಕೃಷಿವಿದ್ಯೆಯಲ್ಲ. ಅನಾದಿಕಾಲದಿಂದ ವೈರದಿಂದಿದ್ದ ಶತ್ರುಗಳೂ ತೃಷ್ಟ್ರವೂ ಬೃಹಸ್ಪತಿಯ ದಂಡನೀತಿಪ್ರಭಾವದಿಂದ ಒಂದಾಗಿ ಸೇರಿ, ವಿಶ್ವಕರ್ಮನ ಸಹಾಯದಿಂದ, ಪ್ರಕೃತಿಯ ಸಮಸ್ತ ಭೂತಶಕ್ತಿಯನ್ನೂ ಆಕರ್ಷಿಸಿ, ವಿಶ್ವರಥಯಂತ್ರವನ್ನು ರಚಿಸಿದರು. ಈ ಯಂತ್ರವಿಶೇಷವು ಕೇವಲ ಯುದ್ಧಾರ್ಥವಾಗಿ ಮಾತ್ರ ರಚಿತ ವಾಯಿತು. ವಿಶ್ವವನ್ನೇ ಇವರು ರಥವನ್ನಾಗಿ ಮಾಡಿಕೊಂಡರೆಂದು ಹೇಳಿದರೂ ಅತಿಶಯೋಕ್ತಿಯಾಗಲಾರದು. ದೇವಲೋಕದಲ್ಲಿ, ಶಿವನ ಮೇಲುವಿಚಾರಣೆಯಲ್ಲಿ ಇಂತಹ ಯಂತ್ರರಚನೆಯಾಗುತ್ತಿದ್ದಾಗ, ನಮ್ಮ ಶುಕ್ರಾಚಾರ್ಯರು ಅದಕ್ಕೆ ರವೆಯಷ್ಟಾದರೂ ಅಡ್ಡಿಪಡಿಸಬೇಡವೆ ?

**ಸುಗ್ರೀ:—** ಹಾಗೆ ಅಡ್ಡಿಪಡಿಸುವುದಕ್ಕೆ ಸೇನೆ ಕಳುಹಿಸಬೇಕೆಂದು ನಮ್ಮ ಗುರುಗಳು ಬೇಕಾದಷ್ಟು ಪ್ರಯತ್ನಪಡಲಿಲ್ಲವೇ ? ನಮ್ಮ ಕೈಲಾಸದಿಗ್ವಿಜಯವು ಅದಕ್ಕೆ ಅವಕಾಶವನ್ನು ತಪ್ಪಿಸಿತು.

**ಕರಾಳ:—** ನಮ್ಮ ಮನೆಯ ದೇವರಾಗಿದ್ದ ಶಿವನು ಈಗ ನಮ್ಮ ಶತ್ರುಗಳನ್ನು ಸೇರಿಕೊಂಡರೆ, ನಾವು ಸಹಿಸಿ ಸುಮ್ಮನಿರಲಾದೀತೇ ? ಇವನ ಮಗನು, ನಮ್ಮ ರಾಜಕುಮಾರರ ತಂದೆಯಾದ ತಾರಕಾಸುರ ನನ್ನು ಕೊಂದ ದ್ರೋಹಕ್ಕೆ ಪ್ರಾಯಶ್ಚಿತ್ತ ಕೊಡದೆ ಬಿಡಲಾದೀತೆ ? ಶಿವನೂ ಅವನ ರಾಜ್ಯಮುಖ್ಯರೂ ಸ್ವರ್ಗದಲ್ಲಿ ಗಲಭೆಯಲ್ಲಿದ್ದ ಸಮಯ ವನ್ನು ಸಾಧಿಸಿ, ನಮ್ಮ ಕಮಲಲೋಚನ-ವಿದ್ಯುನ್ಮಾಲಿಯರು ಕೈಲಾಸ ವನ್ನು ಮುತ್ತಿದರು. ನಮ್ಮ ಸೇನೆಯು ಕೈಲಾಸನನ್ನು ಸಂಪೂರ್ಣವಾಗಿ ಸೂರೆಮಾಡಿ, ವಾಸಾಯೋಗ್ಯವಾಗುವಂತೆ ಧ್ವಂಸಮಾಡಿದ್ದಲ್ಲದೆ, ಗೌರೀ ದೇವಿಯನ್ನು, ಅವಳ ಸೋದರ ಸೋದರಿ ಗುರುಸಮೇತ ಸೆರೆಹಿಡಿದು ತಂದೆವು. ಗೌರಿಯು ತ್ರಿಪುರಸುಂದರಿಯಾಗಿ ಸ್ವರ್ಣನಗರಿಯಲ್ಲೂ, ಅವಳ ಸಹೋದರಿಯಾದ ಮೋಹಿನೀದೇವಿಯು ರಜತಪುರಿಯಲ್ಲೂ, ಸಹೋದರ ನಾದ ಮಹಾಮಾಯನೆಂಬವನು ಲೋಹನಗರಿಯಲ್ಲೂ ನಮ್ಮ ದಾಸ ರಾದರು. ತ್ರಿಪುರಸುಂದರಿಯ ಗುರುವಾದ 'ಬುದ್ಧಮುನಿ' ಎಂಬವನು ಸ್ವರ್ಣನಗರಿಯಲ್ಲಿ ಒಂದು ಅಪರೂಪವಾದ ಅಶ್ವತ್ಥವೃಕ್ಷವನ್ನು ಬೆಳೆ ಯಿಸಿ, ಅದರ ಬುಡದಲ್ಲಿ ನೆಲಸಿ ಭಿಕ್ಷೆಯಿಂದ ಜೀವಿಸಬೇಕಾಯಿತು!

ಮೋಹಿನಿಯೊಡನೆ 'ಸುರಭಿ' ಎಂಬ ಗೋರತ್ನವು, ತನ್ನ ವತ್ಸದೊಡನೆ ನಮ್ಮ ವಶವಾಯಿತು. ಈ ಅನ್ಯಾದೃಶವಾದ ವಿಜಯಕ್ಕೆ ಅಸುರಲೋಕವೆಲ್ಲವೂ ಸಂತೋಷಪಡುತ್ತಿರುವಾಗ, ಶುಕ್ರಾಚಾರ್ಯರು ಮಾತ್ರ ನಮ್ಮ ರಾಜಕುಮಾರರನ್ನು ಮನಸ್ಸಿನ ಆಕ್ಷೇಪಿಸಿ ನಿಂದಿಸಿದರು.

**ಮಯ:** -- ಅದಕ್ಕೆ ಕಾರಣವುಂಟು. ನೀವು ಹೆಂಗಸರನ್ನೂ ಯುತಿಗಳನ್ನೂ ಸೆರೆಹಿಡಿದು ತಂದದ್ದರಿಂದ ಯಾರಿಗೆ ಏನು ಲಾಭ? ಅದರಿಂದ ನಮ್ಮ ಕೀರ್ತಿಯು ಮಾಸುವುದು. ಕೈಲಾಸವನ್ನು ನೀವು ನಾಶಮಾಡಿದ್ದರಿಂದ, ಶಿವನು ಇನ್ನು ಮುಂದೆ ಭೂಲೋಕದಲ್ಲಿ ನೆಲಸಿ ತಾನೇ ಪ್ರಭುತ್ವವನ್ನು ವಹಿಸಬಹುದು. ಅದೂ ನಮಗೆ ಅಪಾಯಕರವಾಗುವುದು. ಗುರುಗಳ ಆಜ್ಞೆಯಂತೆ ನೀವು ಅಸುರಸೇನೆಯನ್ನು ದೇವಲೋಕಕ್ಕೆ ನಡೆಯಿಸಿ, ವಿಶ್ವರಥರಚನಾಕಾರ್ಯವನ್ನು ನಿಲ್ಲಿಸಿದ್ದರೆ ನಮಗೆ ಕ್ಷೀಣತೆಯು ಎಂದೆಂದಿಗೂ ಸಂಭವಿಸುತ್ತಿರಲಿಲ್ಲ.

**ಸುಗ್ರೀವ:**— ಈ ಕಾರ್ಯಕ್ಕೆ ನಿನ್ನನ್ನು ನಿಯೋಜಿಸಿ ಕಳುಹಿಸಿದ್ದರಲ್ಲವೇ?

**ಮಯ:**— ನಾನೊಬ್ಬನು ಹೋಗಿ ಏನು ಮಾಡಬಲ್ಲೆನು? ನಾನು ದೇವತಾವೇಷದಿಂದ ಕೆಲಸಗಾರನಂತೆ ಅಲ್ಲಿಗೆ ಹೋಗಿದ್ದೆನು. ವಿಶ್ವರಥನಿರ್ಮಾಣ ಕಾರ್ಯದಲ್ಲಿ ನನ್ನನ್ನೂ ಹಾಕಿದರು. ನಾನು ರಥಕ್ಕೆ ಶಿರೋಭಾರವಾಗುವಂತೆ ತಂತ್ರಮಾಡಿದೆನು.

**ಸುಗ್ರೀವ:**— ಈ ರಥವು ಜಂಗಮವಾದುದು ಹೇಗೆ?

**ಮಯ:**— ದೇವಶಿಲ್ಪಿಗಳು ಅದನ್ನು ಜಂಗಮವಾಗಿ ಮಾಡಲಾರದೆ ಹೋದರು. ಆಗ ಇಂದ್ರನು ಬ್ರಹ್ಮನಿಗೆ ಮೊರೆಯಿಟ್ಟನು. ಬ್ರಹ್ಮೋಪದೇಶದಂತೆ ರಥಕ್ಕೆ ವೇದವೇದಾಂಗಾದಿ ವಿದ್ಯೆಗಳನ್ನು ಚಕ್ರವನ್ನಾಗಿಯೂ ಕುದುರೆಗಳನ್ನಾಗಿಯೂ ಸೇರಿಸಿದರು. ವಿದ್ಯೆಗಳು ಇದಕ್ಕೆ ಜಂಗಮಶಕ್ತಿಯನ್ನು ಕಲ್ಪಿಸಿದುವು. ಆದರೆ ಅಖಿಲವಿದ್ಯೆಗಳ ಪ್ರಯೋಗಗಳನ್ನೂ ತಿಳಿದವನು ಸಾರಥಿಯಾಗದೆ ರಥವು ಚಲಿಸಲಾರದಾದ್ದರಿಂದ ದೇವತಾಪ್ರಾರ್ಥನೆಯಂತೆ ಬ್ರಹ್ಮನು ಸಾರಥ್ಯವನ್ನು ವಹಿಸಿದನು.

ರಥವನ್ನು ಶಿವನು ಸ್ವಲ್ಪ ಮುಂದಕ್ಕೆ ಬಿಟ್ಟಕೂಡಲೆ, ರಥವು ಮುಗ್ಗರಿಸಿ ಬಿದ್ದು ಹೂತು ಹೋಯಿತು.

**ಸುಗ್ರೀವ:**— ರಥವು ಮೇಲಕ್ಕೆದ್ದ ಬಗೆ ಹೇಗೆ?

**ಮಯ:**— ಹರಿಯು ವೃಷಭಾಕಾರದಿಂದ ಅದನ್ನು ಮೇಲಕ್ಕೆ ತ್ತಿದನು.

**ಸುಗ್ರೀವ:**— ಅದು ಹೇಗೆ ನಡೆಯಿತು?

**ಮಯ:**— ಹರಿಯ ಆದೇಶದಿಂದ ದೇವತೆಗಳು ತಮ್ಮಲ್ಲಿದ್ದ ವೃಷಭಗಳನ್ನೆಲ್ಲಾ ಕಟ್ಟಿಸಿ, ಎಳೆಯಿಸಿ ರಥವನ್ನು ಮೇಲಕ್ಕೆ ಎತ್ತಿದರು. ರಥದ ಶಿರೋಭಾರವನ್ನು ಸರಿಪಡಿಸಿ, ದೇವತೆಗಳು ಶಿವನ ನೇತೃತ್ವದಲ್ಲಿ ವಿಶ್ವರಥವನ್ನು ನಡೆಯಿಸಿಕೊಂಡು ಬಂದು, ನಮ್ಮ ರಾಜ್ಯಕ್ಕೆ ಮುತ್ತಿಗೆ ಹಾಕಿರುವರು. ನಮ್ಮ ನಾಶಕ್ಕಾಗಿ ವಿಷ್ಣುವೇ ಬಾಣವಾಗಿ ಅವತರಿಸಿ, ಶಿವನ ವಶವಾಗಿರುವಂತೆ. ಈ ಸಲ ವಿಷ್ಣುವು ಕೇವಲ ಅಂತರ್ಯಾಮಿ ಯಾಗಿಯೇ ನಮ್ಮ ಮೇಲೆ ಕಾರ್ಯಾಚರಣೆ ಮಾಡಲು ಸಂಕಲ್ಪಿಸಿರುವ ನಂತೆ. ವಿಜಯಪ್ರಾಪ್ತಿಗೆ ಸ್ವಬಲಾಭಿವೃದ್ಧಿಪ್ರಯತ್ನ ಮಾತ್ರವೇ ಸಾಲ ದೆಂದೂ,ಅದರ ಜತೆಗೆ ಶತ್ರುಬಲ ಕ್ಷೀಣತೆಗೂ ಪ್ರಯತ್ನ ಮಾಡಬೇಕೆಂದೂ ನಮ್ಮ ಗುರುಗಳು ಹೇಳುತ್ತಿರುವರು. ದೇವತೆಗಳಿಗೆ ನಮ್ಮ ತ್ರಿಪುರ ಯಂತ್ರವನ್ನು ವಿನಾಶಿಸಿದ ವಿಶ್ವರಥಯಂತ್ರವು ದೊರೆತರೂ ಜಯವು ದುರ್ಲಭವಾಗಿರುವುದು. ಆದ್ದರಿಂದ ಹರಿಯು ಒಳಹೊಕ್ಕು ನಮ್ಮ ಬಲವನ್ನು ಶೋಷಿಸುತ್ತಾ ಬರುತ್ತಿರುವನು. ಹರಿಮಾಯೆ ಇಲ್ಲದಿದ್ದರೆ, ನಮ್ಮಲ್ಲಿ ಇಂತಹ ಅಂತಃಕಲಹಗಳೂ ಅವಿವೇಕಗಳೂ ಹುಟ್ಟು ತ್ತಿದ್ದುವೇ?

**ಕರಾಳ:**— ಸದ್ದು, ರಾಜಪುತ್ರರು ಬರುತ್ತಿರುವರು.

[ **ಕಮಲಲೋಚನ** ವಿದ್ಯುನ್ಮಾಲಿಯರ ಪ್ರವೇಶ. ]

**ಮಯ:**— ರಾಜಪುತ್ರರು ಸುಖಾಸೀನರಾಗಬೇಕು. ( **ಅವರು ಹಾಗೆ ಮಾಡುವರು.** )

**ಕಮಲ:**— ಮಹಾರಾಜನು ಬರುವುದು ಇನ್ನೂ ತಡವಾಗು ವಂತಿದೆ. ಕರಾಳ, ಬಾಯಾರಿಕೆಯಾಗಿದೆ; ಹೋಗಿ ಅತಿ ಸಾರವತ್ತಾದ ವೀರಪಾನವನ್ನು ತೆಗೆದುಕೊಂಡು ಬಾ.

**ಕರಾಳ:**— ಅಪ್ಪಣೆ ( ಹೋಗುವನು. )

**ವಿದ್ಯು:**— ಈ ಊರಿನಲ್ಲೂ ನಿನಗೆ ಮದ್ಯವು ಬೇಕೇ? ಅಗ್ರಜನು ನೋಡಿದರೆ ಏನೆನ್ನುವನು?

**ಕಮಲ:**— ಅನ್ನತಕ್ಕದ್ದನ್ನೆಲ್ಲಾ ಒಂದೇ ತಡವೆಗೆ ಅಂದುಬಿಡಲಿ.

[ ಕರಾಳನ ಪ್ರವೇಶ ]

**ಕರಾಳ:**— ಮಹಾಪ್ರಭು, ಇಲ್ಲಿ ಬಳಸೀರಿನ ಹೊರತಾಗಿ ಮತ್ತಾವ ವೀರಪಾನವೂ ದೊರೆಯದು. ಅದನ್ನು ಪಾತ್ರ ತಂದಿದ್ದೇನೆ. (**ಕೊಡುವನು.**)

**ಕಮಲ:**— ( ಸ್ವಲ್ಪ ಕುಡಿದು ) ಇದು ನನಗೆ ಸೇರದು. ಕರಾಳ, ನೀನು ನನ್ನ ಬಿಡಾರಕ್ಕೆ ಹೋಗಿ, ರಹಸ್ಯವಾಗಿ ಮದ್ಯವನ್ನು ತೆಗೆದು ಕೊಂಡು ಬಾ.

**ಕರಾಳ:**— ಅಪ್ಪಣೆ ( ಹೋಗುವನು. )

**ವಿದ್ಯು:**— ಕೈಲಾಸದಿಂದ ನಾವು ತಂದಿದ್ದ ತ್ರಿಪುರಸುಂದರಿಯು ಏನು ಮಾಡಿಕೊಂಡಿರುವಳು?

**ಮಯ:**— ಅವಳು ಈಗ ದೊಡ್ಡ ಯೋಗಿನಿಯಾಗಿ ಬಿಟ್ಟಿರುವಳು. ಬುದ್ಧಮುನಿಯಂತೆ ಅವಳು ಒಂದು ವಿಚಿತ್ರವಾದ ಮತವನ್ನು ಈ ನಗರ ದಲ್ಲಿ ಹರಡುತ್ತಿರುವಳು.

**ಕಮಲ:**— ಅದಕ್ಕೆ ಹೆಸರೇನಂತೆ?

**ಹಸ್ತಿ:**— ಶಕ್ತಿಯನ್ನು ಉಪಾಸಿಸತಕ್ಕ ಶಾಕ್ತಮತವೆಂದು ಹೇಳುತ್ತಿರುವಳು.

**ವಿದ್ಯು:**— ನಮ್ಮ ಗುರುಗಳೂ ಶಕ್ತ್ಯುಪಾಸಕರೆಂದು ಪ್ರಸಿದ್ಧ ರಾಗಿರುವರಲ್ಲವೇ?

**ಮಯ:**— ನಮ್ಮ ಗುರುಗಳು ರಾಜಶಕ್ತಿಯ ಉಪಾಸಕರು. ರಾಜ್ಯವು ಅಖಂಡವಾಗಿ ಶಕ್ತಿಯನ್ನು ಸಂಪಾದಿಸುತ್ತಾ ಹೋಗ

ಬೇಕೆಂದೂ ಅದಕ್ಕಾಗಿ ವಿಶ್ವದ ಶಕ್ತಿಗಳನ್ನು ವಿಜ್ಞಾನದ ಸಹಾಯದಿಂದ ವಶಪಡಿಸಿಕೊಳ್ಳಬೇಕೆಂದೂ ಅವರು ಹೇಳುವರು. ತ್ರಿಪುರಸುಂದರಿಯು ಈ ಜಡಪ್ರಕೃತಿಯ ಶಕ್ತಿಗಳನ್ನು ಉಪಾಸಿಸುವುದಕ್ಕಿಂತಲೂ ಚೈತನ್ಯ ಶಕ್ತಿಯನ್ನು ಉಪಾಸಿಸುವುದು ಮೇಲೆಂದೂ, ಈ ಚೈತನ್ಯಶಕ್ತಿಗಳೆಲ್ಲವೂ ಸ್ತ್ರೀಜಾತಿಯಲ್ಲಿ ಸಂಯುಮವಾಗಿರುವುದರಿಂದ ಸಕಲರೂ ಸ್ತ್ರೀದೇವಿಯ ಉಪಾಸಕರಾಗಿ ಯೋಷಿಯನ್ನು ಪೂಜಿಸಬೇಕೆಂದೂ ಸಾರುತ್ತಿರುವಳು. ಆಗಲೇ ಇವಳ ಮತಕ್ಕೆ ಸಾವಿರಗಟ್ಟಲೆ ಪಾಮರರು ಸೇರಿರುವರು.

**ವಿದ್ಯು:**— ಏನು ರಂಪವಿದು ? ಹಸ್ತಿ, ನೀನು ಈ ಘಾತಾಪಲಂಬಿ ಗಳ ಸಂಖ್ಯೆಯನ್ನು ಗಣತಿ ಮಾಡಿಸಿ ಬಂದು ನನಗೆ ತಿಳಿಸು.

**ಹಸ್ತಿ:**— ಅಪ್ಪಣೆ ( ಹೋಗುವನ. )

**ವಿದ್ಯು:**— ಸುಗ್ರೀವ, ನೀನು ಈ ನಗರದಲ್ಲಿರತಕ್ಕ ಸ್ತ್ರೀಪುರುಷ ಸಂನ್ಯಾಸಿಗಳ ಗಣತಿಯನ್ನು ಗೊತ್ತು ಹಚ್ಚಿ ತಿಳಿಸುವವನಾಗು.

**ಸುಗ್ರೀವ:**— ಅಪ್ಪಣೆ ( ಹೋಗುವನು )

**ಕಮಲ:**— ಅಗ್ರಜನು ಇನ್ನು ಹೊತ್ತಾದರೂ ಬರಲಿಲ್ಲ. ನೀನು ಹೋಗಿ ನಾವು ಬಂದಿರುವ ಅಂಶವನ್ನು ಅರಿಕೆಮಾಡು.

**ಮಯ:**— ಮಾಡುತ್ತೇನೆ. ( ಹೋಗುವನು. )

**ವಿದ್ಯು:**— ಈ ಸಲ ಎಲ್ಲವನ್ನೂ ಬಚ್ಚಿಟ್ಟೇ ಚರ್ಚಿಸಿ, ಬಂದು ಇತ್ಯರ್ಥಪಡಿಸಬೇಕೆಂದು ಸಂಕಲ್ಪಿಸಿದ್ದೇನೆ. ನೀನೂ ಅಗ್ರಜನೂ ದುಷ್ಕೃತ್ತರೂ ಅವಿವೇಕಿಗಳೂ ಆಗಿ, ನಮ್ಮ ಸಾಮ್ರಾಜ್ಯವನ್ನು ಹಾಳು ಮಾಡಿರುವಿರಿ. ನಾನು ಇನ್ನು ಸುಮ್ಮನಿದ್ದರೆ ಆಗುವುದಿಲ್ಲ. ನಿನ್ನ ನಗರದಿಂದ ಮೋಹಿನಿಯನ್ನು ಅಪಹರಿಸಿದಂತೆ, ಈಗ ಇಲ್ಲಿಂದ ತ್ರಿಪುರಸುಂದರಿಯನ್ನೂ ಬುದ್ಧಮುನಿಯನ್ನೂ ಕೊಂಡೊಯ್ಯು ತಕ್ಕ ಶಾಸನ ಮಾಡುತ್ತೇನೆ.

**ಕಮಲ:**— ನನ್ನ ವಿಷಯದಲ್ಲಿ ನೀನು ಈಚೆಗೆ ಸರ್ವದಾ ಅಪರಾಧಗಳನ್ನು ಎಸಗುತ್ತಲೇ ಬರುತ್ತಿರುವೆ.

**ವಿದ್ಯು:**— ಹಾಗಾದರೂ ನಿನಗೆ ಬುದ್ಧಿ ಬರಲಿಲ್ಲ.

**ಕಮಲ:**— ನಾನು ನಿನ್ನ ಸಹಸ್ರಾಪರಾಧವನ್ನಾದರೂ ಸೈರಿಸ

ಬಲ್ಲೆನು. ಆದರೆ ನೀನು ನನ್ನ ಪ್ರಿಯ ಮೋಹಿನೀದೇವಿಯನ್ನು ಕಳ್ಳತನದಿಂದ ಅಪಹರಿಸಿಕೊಂಡು ಹೋಗಿರುವುದನ್ನು ಹೇಗೆ ಕ್ಷಮಿಸಲಿ ?

**ವಿದ್ಯು:**— ಅವಳ ಮೇಲೆ ನಿನಗೇನು ಅಧಿಕಾರ ? ಸೆರೆಯಲ್ಲಿ ದೊರೆತ ಸ್ತ್ರೀಯು ನಮ್ಮೆಲ್ಲರಿಗೂ ಸಮಾನಳಾಗಿ ಸೇರಿರುವಳು.

**ಕಮಲ:**— ಆದರೂ ಅವಳು ಒಂದಾಗಿನಿಂದಲೂ ರಜತನಗರಿಯಲ್ಲೇ ಇದ್ದಳು. ಅವಳ ಅನುಗ್ರಹವನ್ನು ಸಂಪಾದಿಸಲು, ನಾನು ರಾತ್ರಿ ಹಗಲೂ ಅವಳ ಮನೆಯ ಬಾಗಿಲಲ್ಲಿ ಆಶ್ರಯಿಸುತ್ತಿರುವುದನ್ನು ತಿಳಿದಿದ್ದೂ ನೀನು ಇಂತಹ ಕೆಲಸ ಮಾಡಬಹುದೇ ?

**ವಿದ್ಯು:**— ನಮಗೆ ಇವಳ ತೊಂದರೆ ಮಿತಿಮೀರಿತು. ಅಗ್ರಜಾ, ನೀನು ಇವಳಿಗೆ ಮೋಹಪಟ್ಟು ಇವಳು ಹೇಳಿದಂತೆ ಕುಣಿಯಲಾರಂಭಿಸಿದ್ದೀಯೆ. ಇವಳ ಪ್ರಭಾವದಿಂದ ರಜತನಗರಿಯ ಸ್ತ್ರೀಪುರುಷರೆಲ್ಲರೂ ವಿಷಯಲಂಪಟರಾಗಿ, ಪಶುಗಳಂತೆ ವ್ಯವಹರಿಸಲಾರಂಭಿಸಿದ್ದಾರೆ. ಸ್ವರ್ಗದ ಸುಖವೂ ಮೋಕ್ಷದ ಆನಂದವೂ ಸ್ತ್ರೀಪುರುಷಸಂಭೋಗಸುಖದ ಪ್ರಕಾರಾಂತರ ಮಾತ್ರವೆಂದೂ, ಈ ಸಂಭೋಗಮಾರ್ಗದಿಂದ ಸ್ತ್ರೀಪುರುಷರು ವಿವಾಹ, ಕುಟುಂಬ, ಜಾತಿ, ಕುಲ, ಗೋತ್ರ, ಮಾನ, ಧರ್ಮ, ನೀತಿ ಮೊದಲಾದ ತಡೆಗಳನ್ನು ಮೆಟ್ಟಿ, ಸ್ವಚ್ಛಂದವಾಗಿ ಪ್ರೇಮಾರ್ಥ ವಿಹರಿಸಬೇಕೆಂದೂ, ಮಧುವಿಗಾಗಿ ಪುಷ್ಪದಿಂದ ಪುಷ್ಪಕ್ಕೆ ಗಮಿಸುವ ಭೃಂಗದಂತೆ, ಮಾನವರು ಪ್ರೇಮವನ್ನು ಜೀವನದಲ್ಲಿ ಸಾಧಿಸಬೇಕೆಂದೂ ನಿನ್ನ ಮೋಹಿನಿಯು ಒಂದು ವಿಚಿತ್ರಮತವನ್ನು ಹರಡಿ, ಅಸುರರಾಜ್ಯವನ್ನು ಪಶುಗಳ ದೊಡ್ಡಿಯನ್ನಾಗಿ ಮಾಡುತ್ತಿರುವಳು. ಪುರುಷರಿಗಿಂತಲೂ ಸ್ತ್ರೀಯರೇ ಉತ್ತಮರಂತೆ ! ವ್ಯಭಿಚಾರಕ್ಕೆ ದೋಷವಿಲ್ಲವಂತೆ ! ಪ್ರೇಮಸುಖವೇ ಮೋಕ್ಷವಂತೆ ! ಸ್ತ್ರೀಯರು ತಮ್ಮ ಸಾಧುಪ್ರಕೃತಿಯನ್ನೂ ಅಬಲತ್ವವನ್ನೂ ಭೀರುತ್ವವನ್ನೂ ಲಜ್ಜಾಶೀಲತ್ವವನ್ನೂ ಅವನತಿಯನ್ನೂ ಪರಿಹರಿಸಿಕೊಂಡು, ಸರ್ವಸ್ವತಂತ್ರರಾಗಿ ಮೆರೆಯಬೇಕಂತೆ! ವಿವಾಹವೂ ಕುಟುಂಬವೂ ಗೃಹವೂ ನಾಶವಾಗಬೇಕಂತೆ ! ಹುಟ್ಟತಕ್ಕ ಮಕ್ಕಳಲ್ಲಿ ಕುಲಜ—ಜಾರಜ ಭೇದವನ್ನು ಪರಿಗಣಿಸದೆ, ಹುಟ್ಟಿದೊಡನೆಯೆ ರಾಜ್ಯಾಂಗವು ಮಕ್ಕಳನ್ನು ತನ್ನ ಪೋಷಣೆಗೆ ತೆಗೆದುಕೊಂಡು ಸಲಹುತ್ತಾ

ಬರಬೇಕಂತೆ! ಅಲ್ಲದೆ ರಾಜ್ಯಾಂಗವು ಜನಸಮುದಾಯಗಳಿಗೆ ಭೋಜನಾಗಾರಗಳನ್ನು ಏರ್ಪಡಿಸಿ, ಸಕಲರೂ ಬೇರೆ ಬೇರೆ ಸಾವಿರಾರು ಮನೆಗಳನ್ನೂ ಅಡುಗೆಮನೆಗಳನ್ನೂ ಕಟ್ಟಿ, ಕಷ್ಟನಷ್ಟಗಳನ್ನು ಅನುಭವಿಸುತ್ತಾ ಬರುವ ದುಷ್ಟಪದ್ಧತಿಯನ್ನು ತಪ್ಪಿಸಿ, ಸಕಲರೂ ರಾಜಭೋಜನಾಲಯಗಳಲ್ಲಿ ತಮ್ಮ ಭೋಜನಕಾರ್ಯವನ್ನು ನೆರವೇರಿಸಿಕೊಳ್ಳಬೇಕಂತೆ! ಇಂತಹ ಕ್ಷುದ್ರಮತವು ನಿನ್ನ ಸಹಕಾರದಿಂದ ಹರಡುತ್ತಿದ್ದರೆ ನಾನು ಸುಮ್ಮನಿರಲಾದೀತೇ?

**ಕಮಲ:**— ಸದಾ ಯುದ್ಧದ ತೊಡಕಿನಲ್ಲಿ ಸಿಕ್ಕಿಕೊಂಡು, ಸಾವನ್ನು ಪ್ರತಿಕ್ಷಣವೂ ನಿರೀಕ್ಷಿಸುತ್ತಲೆ ಇರತಕ್ಕ ನಮ್ಮ ನಾಗರಿಕರು, ಮೋಹಿನೀದೇವಿಯು ಪರಾಮರ್ಶಿಸುವಂತೆ ಸ್ವಲ್ಪ ಆನಂದವನ್ನು ಪಡೆದರೆ ಅಷ್ಟಕ್ಕೇ ನಿನಗೆ ಸಹನೆಯಾಗಲಿಲ್ಲವೇ? ನಮ್ಮ ಊರಿನವರು ನೀನು ಒದಗಿಸತಕ್ಕ ದ್ರವ್ಯದಿಂದ ಜೀವಿಸುತ್ತಿರುವರು. ಈ ದ್ರವ್ಯಗಳನ್ನು ಪ್ರತಿ ವ್ಯಕ್ತಿಯೂ ಬೇರೆಬೇರೆಯಾಗಿ ನಿನ್ನಿಂದ ತಂದು ಉಪಭೋಗಿಸುವ ದುಂದು ದುಬಾರಿಗಿಂತಲೂ, ಅವುಗಳನ್ನು ರಾಜ್ಯಾಂಗವು ಒಂದು ರಾಶಿಯಾಗಿ ತಂದು, ಎಲ್ಲರೂ ಏಕವಾಗಿ ಉಪಭೋಗಿಸುವಂತೆ ವ್ಯವಸ್ಥೆ ಮಾಡುವುದು ಉತ್ತಮವಲ್ಲವೇ? ಸ್ತ್ರೀಪುರುಷರ ಸಮಾಗಮವನ್ನು ನೀನು ಎಂದಿಗೂ ತಪ್ಪಿಸಲಾರೆ. ಈ ಸಮಾಗಮವು ರಮಣೀಯವಾಗಿ ನಡೆಯಲೆಂದು ಮೋಹಿನೀದೇವಿಯು ಉಪದೇಶಿಸಿದರೆ ಅದರಲ್ಲಿ ತಪ್ಪೇನು?

**ವಿದ್ಯು:**— ಅವರ ತಪ್ಪು ನಿನಗೆ ಇನ್ನೂ ಮನದಟ್ಟಾಗಿಲ್ಲವೆ? ಈ ಮೋಹಿನೀಪಿಶಾಚವು ನಿನ್ನ ವಿವೇಕವನ್ನು ಸಂಪೂರ್ಣವಾಗಿ ಹಾಳು ಮಾಡಿರುವುದು. ಶತ್ರುಗಳು ನಿನ್ನ ನಗರವನ್ನು ಮುತ್ತಿ, ನಮ್ಮೂರಿನ ಕಡೆಗೆ ತಲೆಹಾಕುತ್ತಿರುವರು. ನಿನ್ನ ನಾಗರಿಕರು ಸ್ತ್ರೀಲೋಲರಾಗಿ, ಯುದ್ಧದ ಚಿಂತೆಯನ್ನು ಬಿಟ್ಟು, ಪಶುಗಳಂತೆ ವ್ಯವಹರಿಸುತ್ತಿರುವರು. ಯುದ್ಧವು ಮನೆಯ ಬಾಗಿಲಲ್ಲಿ ತಲೆಹಾಕಿರುವಾಗ, ನೀವುಗಳು ನಮ್ಮ ಕಾರ್ಯಾಲಯಗಳಿಂದ ಯುದ್ಧೋಪಕರಣಗಳನ್ನು ನಿರ್ಮಿಸಿಕೊಡಬೇಕೆಂದು ಕೇಳದೆ, ದಿವ್ಯವಸ್ತ್ರಭೂಷಣ ಪರಿಮಳಾದಿಗಳನ್ನು ಒದಗಿಸಬೇಕೆಂದು ನಿರ್ಬಂಧಿಸುತ್ತಿರುವಿರಿ! ನಿನ್ನ ಮೋಹಿನಿಯು ಮುದ್ದಿಸುತ್ತ

ಲಿರುವ 'ಸುರಭಿ' ಎಂಬ ಗೋವಿನಲ್ಲಿರುವಂತಹ ಅಪೂರ್ವವಾದ ಪರಿಮಳ ಗಂಧವನ್ನು ನಾವು ನಿರ್ಮಿಸಿ ಕಳುಹಿಸುವಾತೆ ನೀನು ಪ್ರತಿದಿನವೂ ಹಿಂಸಿಸುತ್ತಿರುವೆ. ಈ ಭೋಗವಸ್ತುಗಳನ್ನು ನಾನು ಎಷ್ಟು ಕಳುಹಿಸಿದರೂ ನಿಮಗೆ ತೃಪ್ತಿಯೇ ಇಲ್ಲ. ನಿಮ್ಮ ನಿರ್ಬಂಧದಿಂದ ನನ್ನ ನಗರದ ಕೈಗಾರಿಕೆಗಳ ವ್ಯವಸ್ಥೆಯು ಸಡಿಲವಾಗಿದೆ. ಅದೇನು, ನಿಮ್ಮ ನಾಗರಿಕರು ಮಾತ್ರವೇ ಭೋಗಲಂಪಟರಾಗಿ ಮೆರೆಯಬೇಕು; ನಮ್ಮವರು ಜೀತವಶುಗಳಾಗಿ ದುಡಿಯಬೇಕೋ ?

**ಕಮಲ:—** ನಮ್ಮ ನಗರವು ಕ್ಷತ್ರಿಯರ ಬೀಡು. ಕ್ಷತ್ರಿಯರು ಯಾವಾಗಲೂ ವಿಲಾಸಪಟುಗಳು

**ವಿದ್ಯು:—** ಇತರರು ವಿಲಾಸಕ್ಕೆ ಅನರ್ಧಕಾರಿಗಳೆಂದು ಭಾವಿಸುತ್ತೀಯೋ ? ಅದೂ ಹಾಗಿರಲಿ, ನನ್ನ ನಗರದ ಶ್ರೀಮಂತರು ನಿಮ್ಮೂರಿಗೆ ಬಂದರೆ, ನಿಮ್ಮ ಜನರು ಅವರ ಸ್ತ್ರೀಯರನ್ನೆಲ್ಲಾ ಅಪಹರಿಸಿ ಕೆಡಿಸುವುದು ಯೋಗ್ಯವೇ ?

**ಕಮಲ:—** ಅದು ಪ್ರಮಾದದಿಂದ ಸಂಭವಿಸಿತು.

**ವಿದ್ಯು:—** ಅಣ್ಣಾ, ಹಾಳು ಬುದ್ಧಮುನಿಯು ಉಪದೇಶದಿಂದ ಮಾಂಸಾಹಾರವನ್ನು ನಿಷೇಧಿಸಿಬಿಟ್ಟಿರುವನು. ಇದರಿಂದ ನಮ್ಮ ಜನರಿಗೆ ಅಮೃತತುಲ್ಯವಾದ ಗೋಮಾಂಸವು ತಪ್ಪಿ ಹೇಡಿತನವು ಹೆಚ್ಚುತ್ತಿದೆ. ಅಖಿಲ ಗೋಧನವನ್ನು ವಶಪಡಿಸಿಕೊಂಡಿರುವ ನೀನು, ಗೋಕ್ಷೀರವನ್ನಾದರೂ ನಮ್ಮ ನಗರದವರಿಗೆ ಏಕೆ ಕೊಡದಿರುವೆ ?

**ಕಮಲ:—** ಈಗ ಯುದ್ಧವು ನಮ್ಮೂರಿನ ಮುಂದೆ ನಡೆಯುತ್ತಿದೆ. ಈ ಕ್ಷೀರವನ್ನು ಔಷಧವಾಗಿ ನಮ್ಮ ಜನರು ಸೇವನೆ ಮಾಡುತ್ತಿರುವರು.

**ವಿದ್ಯು:—** ಅಮೃತವಾಪಿ ಇರುವಾಗ ಬೇರೆ ಔಷಧವೇಕೆ ?

**ಕಮಲ:—** ಅದರ ರಹಸ್ಯವನ್ನು ಕೇಳು ಅಮೃತಮಯವಾದ ಓಷಧಿಗಳಿಂದ ವೈದ್ಯರು ಔಷಧರಸವನ್ನು ತೆಗೆದು, ಅಮೃತವಾಪಿಯಲ್ಲಿ ತುಂಬಿಡುವ ಕಾರ್ಯವು ಬಹಳ ಕಷ್ಟಕರವಾದುದು. ಅದಕ್ಕೆ ಪ್ರತಿಯಾಗಿ ಈ ಓಷಧಿಗಳನ್ನೆಲ್ಲಾ ನಮ್ಮ ಸುರಭಿಗೂ ಗೋವುಗಳಿಗೂ

ತಿನ್ನಿಸಿ, ಅಮೃತವಾಹಿಯ ರಸವನ್ನು ಅವುಗಳಿಗೆ ಕುಡಿಸಿದರೆ, ಅವು ಅಮೃತಮಯವಾಗಿ, ಅಮೃತವನ್ನು ಪಂಚಗವ್ಯರೂಪವಾಗಿ ಸರ್ವದಾ ಹೊಸಹೊಸದಾಗಿ ಕೊಡುತ್ತಾ ಬರುತ್ತವೆಂದೂ, ಅವುಗಳ ಸೇವನೆಯಿಂದ ಅತಿಸುಲಭವಾಗಿ ಚಿಕಿತ್ಸೆ ಹೊಂದಬಹುದೆಂದೂ, ನನ್ನ ಮೋಹಿನೀದೇವಿಯು ಅಭಿಪ್ರಾಯ ಪಟ್ಟಳು. ಅದಕ್ಕೆ ನಾನು ಸಮ್ಮತಿಸಿದೆನು. ಸುರಭಿಯೂ ಅದರ ವತ್ಸವೂ ಉಳಿದ ಗೋಸಮೇತ ಸಮಸ್ತ ಸಕಲ ಓಷಧಿಗಳನ್ನೂ ತಿಂದು, ಅಮೃತವಾಹಿಯನ್ನು ಬತ್ತಿಸಿಬಿಟ್ಟಿವೆ. ಆದ್ದರಿಂದ ನಾವೆಲ್ಲರೂ ಇವರ ಹಾಲನ್ನು ಅಮೃತವೆಂದು ಭಾವಿಸಿ ಪಾನ ಮಾಡುತ್ತಿದ್ದೇವೆ. ಯುದ್ಧವು ನಮ್ಮ ಪಾಲಿಗೆ ಸೇರಿರುವುದರಿಂದ, ಈ ಕ್ಷೀರದಲ್ಲಿ ನೀನು ಭಾಗಕೇಳಲು ಕಾರಣವಿಲ್ಲ.

(ಹಸ್ತಿ ಸುಗ್ರೀವರ ಪ್ರವೇಶ)

**ಹಸ್ತಿ:**— ಮಹಾರಾಜರು ಬರುತ್ತಿರುವರು.

**ವಿದ್ಯು:**— ನಾನು ಹೇಳಿದ ಕೆಲಸವನ್ನು ಮಾಡಿಕೊಂಡು ಬಂದಿರುವಿರಾ?

**ಸುಗ್ರೀವ:**— ಸುವರ್ಣನಗರದ ನಾಲ್ಕನೆಯ ಒಂದು ಭಾಗದವರು ಶಾಕ್ತಮತಾವಲಂಬಿಗಳಾಗಿರುವರು. ಉಳಿದವರು ಬೌದ್ಧರಾಗಿರುವರು. ನಗರದ ಅರ್ಧಭಾಗದ ಜನರು ಸಂನ್ಯಾಸಿಗಳಾಗಿರುವರು. ಉಪನಿಷನ್ಮತವು ಪೂರ್ಣವಾಗಿ ನಷ್ಟವಾಗಿದೆ.

**ವಿದ್ಯು:**— ಎಂತಹ ಭಯಂಕರವಾದ ನಷ್ಟವಿದು.

(ತಾರಕಾಕ್ಷನ ಪ್ರವೇಶ ಎಲ್ಲರೂ ಏಳುವರು. **ತಾರಕಾಕ್ಷ**ನು ಭಿಕ್ಷುವಿನಂತೆ ಬಂದು ಮುಖ್ಯಾಸನದಲ್ಲಿ **ಕು**ಳಿತುಕೊಳ್ಳುವನು)

**ತಾರಕ:**— ಶುಕ್ರಾಚಾರ್ಯರು ಬಂದಿಲ್ಲವೇ? ನೀವು ಹೋಗಿ ಕರೆದುಕೊಂಡು ಬನ್ನಿ. (ಹಸ್ತಿ ಸುಗ್ರೀವರು ಹೋಗುವರು)

**ತಾರಕ:**— ಸಹೋದರರೇ, ಈ ಪುಣ್ಯನಗರಿಗೆ ಸಾತ್ವಿಕವಾದ ವೇಷದಿಂದ ಬರಬೇಕೆಂದು ಹೇಳಿದ್ದರೂ ನೀವು ಹೀಗೆ ಬರಬಹುದೇ?

**ಕಮಲ:**— ನಾವು ನಿನ್ನಂತೆ ಭಿಕ್ಷುಗಳಾಗುವುದು ಅಸಾಧ್ಯ.

ತ್ರಿಲೋಕಾಧಿಪತಿಯಾದ ನಿನಗೆ ಈ ಪಂಜೆಯ ವೇಷವೇಕೆ? ಕೆಲಸಕ್ಕೆ ಬಾರದ ಬೋಳುಗಳ ಸಂಗವೇಕೆ?

**ತಾರಕ:**— ಈ ನೂತನ ಧರ್ಮದ ಸ್ವಾರಸ್ಯವನ್ನು ಅರಿಯಬೇಕಾದರೆ, ನೀವು ಭಗವಾನ್ ಬುದ್ಧಮುನಿಯ ದರ್ಶನವನ್ನು ಮಾಡಿಕೊಳ್ಳಬೇಕು. ನಿಮ್ಮನ್ನು ಅದಕ್ಕಾಗಿಯೇ ಕರೆಯಿಸಿದ್ದೇನೆ.

**ವಿದ್ಯು:**— ನಾವು ಆ ಚಾಂಡಾಲನ ತಲೆ ಚಂಡಾಡಿ, ಈ ಪುಂಡಾಟವನ್ನೆಲ್ಲಾ ನಿಲ್ಲಿಸುತ್ತೇನೆ.

**ತಾರಕ:**—ಶಾಂತಂ ಪಾಪಂ! ಶಾಂತಂ ಪಾಪಂ! ಬುದ್ಧಂ ಶರಣಂ ಗಚ್ಛಾಮಿ! ಧರ್ಮಂ ಶರಣಂ ಗಚ್ಛಾಮಿ! ಸಂಘಂ ಶರಣಂ ಗಚ್ಛಾಮಿ! ಸಹೋದರಾ, ನೀನು ಈ ಪರಿ ನುಡಿಯಬಹುದೇ?

**ವಿದ್ಯು:**— ಅಗ್ರಜಾ, ನಿನ್ನ ಹುಚ್ಚಿನಿಂದ ನಮ್ಮ ರಾಜ್ಯವು ನಾಶವಾಗುವ ಸ್ಥಿತಿಗೆ ಬಂದಿದೆ. ನಿಮ್ಮ ಊರಿನಲ್ಲಿ ಯೋಗ್ಯರಾದವರೆಲ್ಲರೂ ಭಿಕ್ಷು ಭಿಕ್ಷುಣಿಯರಾಗಿ ಪರಾವಲಂಬಿಗಳಾಗಿರುವರು; ಅಯೋಗ್ಯರು ಶಾಕ್ತರಾಗಿರುವರು. ಯೋಗ್ಯರು ಪ್ರಜಾಸಂತತಿಯನ್ನು ಬೆಳೆಯಿಸದೆ ಬಿಟ್ಟು, ಅಯೋಗ್ಯರು ಮಾತ್ರ ಸ್ವೇಚ್ಛೆಯಿಂದ ಅದನ್ನು ವೃದ್ಧಿಪಡಿಸುತ್ತಾ ಬಂದರೆ ಸಮಾಜದ ಗತಿ ಏನಾಗುವುದು? ಬುದ್ಧಿವಂತರೆಲ್ಲರೂ ಸಂನ್ಯಾಸಿಗಳಾಗಿ ಕುಳಿತುಬಿಟ್ಟರೆ, ರಾಜ್ಯಾಂಗವನ್ನು ನಿರ್ವಹಿಸುವುದು ಹೇಗೆ? ಶತ್ರುವು ನಿಮ್ಮ ರಾಜ್ಯವನ್ನು ಮುತ್ತಿ ಉರುವಣಿಸುತ್ತಿರುವಾಗ, ಅಹಿಂಸೆಯೆಂದು ಹೇಳಿಕೊಂಡು ನೀನು ನಿನ್ನವರಿಗೆ ಯುದ್ಧವನ್ನು ನಿಷೇಧಿಸಿರುವುದಲ್ಲದೆ, ತ್ರಿಪುರಗಳಲ್ಲಿಯೂ ಮಾಂಸಾಹಾರವನ್ನು ತಪ್ಪಿಸಿರುತ್ತಿ. ಶತ್ರುವನ್ನು ಎದುರಿಸುವುದಕ್ಕಾಗಿ ರಾಜ್ಯದ ಕೋಟೆ ಕೊತ್ತಲಗಳನ್ನೂ ಶಸ್ತ್ರಗಳನ್ನೂ ಯಂತ್ರಗಳನ್ನೂ ಭದ್ರಪಡಿಸಿ ನಿರ್ಮಿಸುವುದರಲ್ಲಿ ದಕ್ಷನಾದ ಮಯನನ್ನು ಪರಿವಾರ ಸಮೇತ ನೀನು ಕರೆಯಿಸಿಕೊಂಡು, ರಾಜ್ಯದಲ್ಲಿ ಎಲ್ಲೆಲ್ಲೂ ಸ್ತೂಪಗಳನ್ನೂ ವಿಹಾರಗಳನ್ನೂ ಕಟ್ಟಿಸಲು ನಿಯೋಜಿಸಿರುತ್ತಿ. ನನ್ನ ನಗರದಲ್ಲಿ ಹುಟ್ಟುವಳಿಯಾಗುವ ಸಮಸ್ತ ಧನವೂ ನಿನ್ನ ಭಿಕ್ಷುಗಳಿಗೂ ನಿರರ್ಥಕವಾದ ದಾನಧರ್ಮಗಳಿಗೂ ವ್ಯಯವಾಗುತ್ತಿದೆ. ನೀನು ರಾಜ್ಯದ

ಯೋಗಕ್ಷೇಮವನ್ನು ಚಿಂತಿಸದೆ, ಬುದ್ಧನ ಕಾಲಿದೆಸೆಯಲ್ಲಿ ಸದಾ ಕುಳಿತಿದ್ದರೆ, ಅಸುರಕುಲದ ಗತಿಯೇನಾಗಬೇಕು?

**ತಾರಕ**:— ಸಹೋದರಾ, ಇದಕ್ಕಾಗಿ ಚಿಂತೆಯೇಕೆ? ಜೀವನವು ಅನಿತ್ಯವಾಗಿ ದುಃಖಮಯವಾಗಿರುವುದು. ಇದಕ್ಕೆ ತೃಷ್ಣೆಯೇ ಮೂಲವು. ತೃಷ್ಣೆಯು ನಮ್ಮಲ್ಲಿ ಬಿಡುವಿಲ್ಲದೆ ಪ್ರವೃತ್ತಿಗಳನ್ನು ಹುಟ್ಟಿಸುವುದು. ಅವುಗಳಿಂದ ನಾವು ಕೊನೆ ಮೊದಲೇ ಇಲ್ಲದೆ, ಕಾರ್ಯಗಳನ್ನು ಸಂಕಲ್ಪಿಸಿ ಮಾಡುತ್ತಾ ದುಃಖಪಡುತ್ತಿರುವೆವು. ಆದ್ದರಿಂದ ವೈರಾಗ್ಯದಿಂದ ನಾನು ನನ್ನ ಕ್ರಿಯೆಗಳನ್ನೂ ಸಂಕಲ್ಪವನ್ನೂ ಪ್ರವೃತ್ತಿಗಳನ್ನೂ ನಿಗ್ರಹಿಸಿ, ತೃಷ್ಣೆಯನ್ನು ನಾಶಮಾಡಬೇಕೆಂದು ಪ್ರಯತ್ನಪಡುತ್ತಿದ್ದೇನೆ.

**ಕಮಲ**:— ಬಹಳ ಒಳ್ಳೆಯ ಕೆಲಸ ಮಾಡುತ್ತಿರುವೆ! ಈ ಹೊಲಸನ್ನು ನಮ್ಮೂರಿಗೂ ಹರಡಲು, ಹಳದಿಯುಬಟ್ಟೆಯ ಬೋಳುಗಳನ್ನು ಏಕೆ ಕಳುಹಿಸಿ ಕೊಲ್ಲುತ್ತಿ?

**ತಾರಕ**:—ಧರ್ಮವು ಈಗ ಮುಖ್ಯವಾಗಿ ರಜತನಗರಿಯಲ್ಲಿ ಹರಡಬೇಕಾಗಿದೆ. ಅಲ್ಲಿರುವ ಜನರೆಲ್ಲರೂ ನಿರ್ಲಜ್ಜರಾಗಿ, ಜಾರತನದಿಂದ ವ್ಯವಹರಿಸುತ್ತಿರುವರೆಂದು ಕೇಳಿದೆನು. ಕಮಲಲೋಚನಾ, ನೀನು ಯುದ್ಧದಲ್ಲಿ ಸೆರೆಸಿಕ್ಕಿ ಬಂದ, ಪರಸ್ತ್ರೀಯಾದ ಮೋಹಿನೀದೇವಿಯನ್ನು ತಾಯಿಯಂತೆ ಕಾಣುವುದಕ್ಕೆ ಪ್ರತಿಯಾಗಿ, ನಿನ್ನ ಅಧಿಕಾರಬಲದಿಂದ ನಿನ್ನ ಭೋಗಸಾಮಗ್ರಿಯನ್ನಾಗಿ ಮಾಡಿಕೊಂಡಿರುವೆಯೆಂದು ತಿಳಿದೆನು. ಇದೇನು ನಿನ್ನ ನೀಚತನ?

**ಕಮಲ**:— ನನಗೆ ಅಂತಹ ಭಾಗ್ಯವೆಲ್ಲಿಯದು? ನಾನು ಆಕೆಯ ಪ್ರೇಮಾರ್ಥಿಯೇನೋ ನಿಜ. ಆದರೆ ನಾನು ವಿಶ್ವಪ್ರಯತ್ನ ಮಾಡಿದರೂ ನನ್ನನ್ನು ಅವಳು ಒಂದು ಮಾರು ಸಮೀಪಕ್ಕೆ ಸಹ ಇದುವರೆಗೆ ಸೇರಗೊಟ್ಟಿಲ್ಲ.

**ತಾರಕ**:— ನಿನ್ನ ನಾಗರಿಕರ ಸ್ವೈರವೃತ್ತಿಗೆ ಏನು ಹೇಳುತ್ತಿ?

**ಕಮಲ**:— ಸ್ವೈರವೃತ್ತಿ ಯಾವಕಡೆ ಇಲ್ಲ? ನಿನ್ನ ಪುಣ್ಯನಗರದ ಗರತಿಯರು ಸಹ ನಿರ್ವಾಣರಾಗಿ, ಅಶ್ವತ್ಥವೃಕ್ಷವನ್ನು ಆಲಿಂಗಿಸಿ ಪ್ರದಕ್ಷಿಣ ಮಾಡುತ್ತಿರುವರೆಂದು ಕೇಳಿದ್ದೇನೆ.

**ತಾರಕ:**— ಅದು ಸ್ವೈರಪ್ರವೃತ್ತಿಯಾಗುವುದೇ ?

**ವಿದ್ಯು:**— ಆ ಗುಡದೊಳಗೆ ಯಾರು ಅಂತರ್ಗತರಾಗಿರುವರೋ ನಮಗೇನು ಗೊತ್ತು ! ಮಾನವತಿಯಾದ ಪತಿವ್ರತೆಯು ನಿರ್ವಾಣಳಾಗಿ ಗುಡವನ್ನು ತಬ್ಬುವುದು ಸದಾಚಾರವಾದೀತೇ ?

**ತಾರಕ:**— ನಿಮಗೆ ಅದರ ರಹಸ್ಯ ತಿಳಿಯದು. ಕಾಮವನ್ನು ಜಯಿಸುವುದಕ್ಕೆ ಬುದ್ಧಮುನಿಗಳು ನಮ್ಮ ಸ್ತ್ರೀಯರಿಗೆ ಈ ಅತಿ ಸುಲಭೋಪಾಯವನ್ನು ಉಪದೇಶಿಸಿರುವರು. ಈ ಮುನಿಗಳು ಈ ವೃಕ್ಷದ ಆಶ್ರಯದಲ್ಲಿ ಬೋಧವಂತರಾದುದರಿಂದ, ಅವರ ಜ್ಞಾನಸಕ್ತಿಯೆಲ್ಲವೂ ಅದರಲ್ಲಿ ಅಂತರ್ಹಿತವಾಗಿದೆ. ಸ್ತ್ರೀಯರು ನಿರ್ವಾಣರಾಗಿ ಅದನ್ನು ಆಲಿಂಗಿಸುವುದರಿಂದ, ಜ್ಞಾನವಂತರಾಗಿ ಜಿತಕಾಮರಾಗುವರು. ಬೌದ್ಧ ಧರ್ಮಕ್ಕೆ ನಿರ್ವಾಣದೀಕ್ಷೆಯೇ ಮೂಲಮಂತ್ರವು.

**ವಿದ್ಯು:**— ಆಹಾ, ಎಂತಹ ಧರ್ಮ! ನಿಮ್ಮ ಸ್ತ್ರೀಯರು ಈ ಮಾರ್ಗದಿಂದ ಜ್ಞಾನಿಗಳಾಗಿ ಪರಿಣಮಿಸಿ, ಗಂಡನನ್ನು ಮರೆಯುತ್ತಿರುವರು. ಹಾಗೂ ಹೀಗೂ ನಮ್ಮ ರಾಜ್ಯದ ಅನೇಕ ಸ್ತ್ರೀಯರ ಪಾತಿವ್ರತ್ಯವೂ ನಷ್ಟವಾಯಿತು.

**ತಾರಕ:**—ವಿದ್ಯುನ್ಮಾಲಿ, ಅದೇನು, ನಾನು ಅಷ್ಟೊಂದು ಸರಿಯಾಗಿ ನಿಷೇಧಿಸುತ್ತಿದ್ದರೂ ನಿಮ್ಮೂರಿನವರು ಸುರಾಪಾನವನ್ನು ಬಿಡರು ?

**ವಿದ್ಯು:**— ಅದನ್ನು ಬಿಟ್ಟರೆ ಅವರು ಉಳಿಯಲಾರರು. ಬರುಬರುತ್ತ ನಿಮ್ಮ ಸುಲಿಗೆ ಹೆಚ್ಚಾಯಿತು. ಅವರು ಅಹೋರಾತ್ರಿ ದುಡಿದರೂ ನಿಮ್ಮ ಧರ್ಮದ ಹುಚ್ಚಾಟಕ್ಕೂ ಶೃಂಗಾರಭೋಗಕ್ಕೂ ಸಾಲುವುದಿಲ್ಲ. ಅವರ ಮನೆಯ ಹೆಂಗಸರನ್ನು ರಜತಪುರಿಯವರು ನಿತ್ಯವಾಗಿ ಅಪಹರಿಸುತ್ತಿರುವರು. ಅನ್ನದಬಲವೂ ಕಡಿಮೆಯಾಗುತ್ತಿದೆ. ಶತ್ರುಭೀತಿ ಹೆಚ್ಚುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ಚಿಂತೆಯನ್ನು ಮರೆಸಲು, ಸುರೆಯು ಪರಮ ಸಂಜೀವನವಾಗಿದೆ. ಕೆಲಸಗಾರರಿಗೆ ಸುರೆಕುಡಿಸಿದ ಮೇಲೆ ಸಹ ಅಂಕುಶದಿಂದ ಇರಿದು ಕೆಲಸ ಮಾಡಿಸಬೇಕಾಗಿದೆ. ಇದು ಇನ್ನೆಷ್ಟು ದಿನ ನಡೆದೀತು ? ಕಾರ್ಯಾಲಯಗಳಲ್ಲಿ ಬಿಟ್ಟಿಯ ಜೀತಕ್ಕೆ ನಾವು ತಂದುಹಾಕಿಕೊಂಡಿರುವ ಮನುಷ್ಯಕುಲದವರು, ಶೋಷಿಸಿಯ

ಸೋದರನಾದ ಮಹಾಮಾಯನೆಂಬ ಪಾಪಿಯ ದೆಸೆಯಿಂದ ಈಗ ಸ್ವಾತಂತ್ರ್ಯ ಪ್ರವೃತ್ತಿಯನ್ನು ತೋರಿಸುತ್ತಿರುವರು. ಈ ನೀಚನ ಮತಾನುಸಾರವಾಗಿ ಧನಿಕರು, ದರಿದ್ರರು, ಆಳರಸರು, ಸ್ವಾಮಿಭೃತ್ಯರು, ಧನಿಜೀತಗಾರರು ಎಂಬ ಭೇದಗಳು ಇರಕೂಡದಂತೆ! ನಿರ್ಗತಿಕರಾಗಿ ನಗ್ನರಾಗಿರುವ ಈ ಜೀತಗಾರರೆಲ್ಲರಿಗೂ ಸಮಾನರಾಜ್ಯಾಧಿಕಾರವನ್ನು ಕೊಟ್ಟು, ಕೈಗಾರಿಕೆಯ ಉತ್ಪನ್ನವೆಲ್ಲವನ್ನೂ ಅವರಿಗೆ ಸಂಪೂರ್ಣವಾಗಿ ಹಂಚಿಕೊಡಬೇಕಂತೆ! ಸಮಾಜದಲ್ಲಿ ಸಕಲರೂ ಸಮಾನರಾಗಿರಬೇಕಂತೆ! ಸ್ವತ್ತು ಸ್ವಾಸ್ತಿಗಳಿಗಾರಿಗೂ ಇರಕೂಡದಂತೆ! ಕೆಲಸಗಾರರು ತಮ್ಮ ಮಾತುನಡೆಯುವವರೆಗೂ ಕೆಲಸಕ್ಕೆ ಹೋಗದೆ, ಮುಷ್ಕರವ್ರತವನ್ನಾಚರಿಸಿ, ಯಜಮಾನರನ್ನು ಬಗ್ಗಿಸಬೇಕಂತೆ! ಅವರು ಅದಕ್ಕೆ ಬಗ್ಗದಿದ್ದರೆ ಅವರ ಮನೆಮಾರುಗಳಿಗೂ ಯಂತ್ರಗಳಿಗೂ ಬೆಂಕಿಹಚ್ಚಿ ಧ್ವಂಸವ್ರತಾಚರಣೆ (Sabotage) ಯಿಂದ ಕಾರ್ಯವನ್ನು ಸಾಧಿಸಬೇಕಂತೆ! ರಾಜ್ಯಾಧಿಕಾರವು ದೊರೆತ ಮೇಲೆ, ನಿಮ್ನರು ವ್ರತಸಂಕಲ್ಪದಿಂದ ಉತ್ತಮ–ಮಧ್ಯಮಶ್ರೇಣಿಗಳವರನ್ನು ನಾಶಪಡಿಸಿ, ಸಮಾಜಕ್ಕೆ ತಾವೇ ನಿಯಂತೃಗಳಾಗಬೇಕಂತೆ! ಶಾಸ್ತ್ರವೆಂದರೆ ವಾರ್ತಾಶಾಸ್ತ್ರದ (Economics) ಹೊರತು ಮತ್ತೇನೂ ಇಲ್ಲವಂತೆ! ಸಕಲ ಶಾಸ್ತ್ರಗಳೂ ಅದೊಂದರಲ್ಲೇ ಅಡಗಿರುವುವಂತೆ! ಇವನು ಇಂತಹ ವಿಪ್ಲವಕಾರಕ ಮತವನ್ನು ಹರಡಿ, ಲೋಹನಗರಿಯ ಮನುಷ್ಯಜೀತಗಾರರನ್ನೂ ಅಸುರ ಕೆಲಸಗಾರರನ್ನೂ ದಂಗೆಯೆಬ್ಬಿಸಿ, ಊರನ್ನು ಹಿಡಿದು, ಅನಂತರ ರಜತ–ಸ್ವರ್ಣನಗರಿಗಳನ್ನು ಸುಟ್ಟು, ಧ್ವಂಸಮಾಡಬೇಕೆಂದು ಬಗೆದಿರುವನು. ಇವನ ಮಾತನ್ನು ಕೇಳದಂತೆ ಶಿಕ್ಷಾವಿಧಿಯನ್ನು ಕಲ್ಪಿಸೋಣವೆಂದರೆ, ನೀನು ಬುದ್ಧಮುನಿಯ ಉಪದೇಶದಿಂದ ಕಠೋರದಂಡವನ್ನೇ ನಿಷೇಧಿಸಿ, ಪ್ರಜೆಗಳನ್ನು ಶಿಕ್ಷಿಸಬೇಕಾಗಿಬಂದಲ್ಲಿ 'ಹಾಕಾರ' 'ಹಾಮಾಕಾರ' 'ಹಾಮಾಧಿಕ್ಕಾರ'ಗಳನ್ನು ಮೀರಿ ಹೋಗಕೂಡದೆಂದು ನಿರ್ಧರಿಸಿರುತ್ತೆ. ಮಹಾಮಾಯನಿಗೆ ಹಾಕಾರದಂಡವನ್ನು ಮಾಡಿದರೂ ಮೋಹಿನೀಪಿಶಾಚಾಕ್ರಾಂತನಾದ ಕಮಲಲೋಚನನು ನನ್ನ ಮೇಲೆ ತಿರುಗಿ ಬೀಳುವನು. ಇದಕ್ಕೆ ನಾನೇನು ಮಾಡಲಿ?

**ತಾರಕ:**— ನನಗೆ ಈ ಅನ್ನಬಟ್ಟೆಯ ಬಡಿದಾಟ ಬೇಕ್ಕಾಬೇಡಿ. ನನಗೆ

ಸರ್ವವೂ ಶೂನ್ಯವೆಂದು ತೋರುತ್ತಿದೆ. ಜಗತ್ತು ಮಿಥ್ಯೆಯೇ ಸರಿ. ಕ್ಷಣಭಂಗುರವಾದ ಜೀವನದ ಶೋಕವನ್ನು ನಾನು ಮನಸ್ಸಿಗೆ ಹಚ್ಚಿಕೊಳ್ಳಲಾರೆನು. ನಾನು ಅಶೋಕನಾಗಲು ಆಶಿಸುತ್ತೇನೆ.

**ಕಮಲ:—** ಅಗ್ರಜಾ, ನಾವು ನಿನ್ನಿಂದ ತತ್ತ್ವೋಪದೇಶ ತೆಗೆದುಕೊಳ್ಳಲು ಬಂದಿಲ್ಲ. ಶತ್ರುವು ತಲೆಯೇರಿ ಕುಳಿತಿರುವಾಗ, ನೀನು ಹೀಗಿದ್ದರೆ ಏನು ಗತಿ? ಸಕಲ ರಾಜ್ಯಭಾರವನ್ನೂ ನೋಡಿಕೊಂಡು ಹೋಗುತ್ತಿದ್ದ ಶುಕ್ರಾಚಾರ್ಯರನ್ನು ಕೆಲಸದಿಂದ ಬಿಡಿಸಿದೆ. ಈಗ ನೀನು ರಾಜ್ಯಭಾರವನ್ನು ಹೊತ್ತು ಸಾಗಿಸದಿದ್ದರೆ ಮುಂದೇನು? ಹಾಗೆ ಮಾಡಲು ನಿನಗೆ ಇಷ್ಟವಿಲ್ಲದಿದ್ದರೆ ನನಗಾದರೂ ವಹಿಸಿಬಿಡು.

**ವಿದ್ಯು:—** ನೀನು ಕೂಡಲೇ ಹಾಗೆ ಮಾಡದೆ ಹೋದರೆ, ಶತ್ರುಗಳು ನಮ್ಮನ್ನು ನಾಶಮಾಡುವುದು ಸಿದ್ಧ.

[ ಮಯನ ಪ್ರವೇಶ ]

**ಮಯ:—** ಗುರುಗಳು ದಯಮಾಡಿಸಿರುವರು.

[ ಪ್ರಯಾಣಸನ್ನದ್ಧನಾದ ಶುಕ್ರನ ಪ್ರವೇಶ ]

**ಶುಕ್ರ:—** ರಾಜಕುಮಾರರೇ, ನೀವಿನ್ನೂ ಬಾಲಕರು. ನಿಮ್ಮ ಹಿಂದಣ ಅಪರಾಧವನ್ನು ಮನ್ನಿಸುತ್ತೇನೆ. ಈಗಲಾದರೂ ಕಡೆಯದಾಗಿ ನನ್ನ ಮಾತನ್ನು ಕೇಳಿ, ನಿಮಗೆ ಒದಗಿರುವ ಅಪಾಯವನ್ನು ಪರಿಹರಿಸಿಕೊಳ್ಳಿ. ನಿಮ್ಮ ಕ್ಷೀಣತೆಯನ್ನು ಕಣ್ಣು ತೆರೆದು ನೋಡಿ. ನಿಮ್ಮ ರಾಜ್ಯಭಾರದಲ್ಲಿ,ಅನಾಯಕತೆಯೂ ಹೇಡಿತನವೂ ವಿಷಯಲಂಪಟತ್ವವೂ ಅಜ್ಞಾನವೂ ಸರ್ವತ್ರ ಹರಡುತ್ತಿವೆ. ಲೋಕಭಯಂಕರವಾಗಿದ್ದ ನಿಮ್ಮ ಯುದ್ಧಶಕ್ತಿಯು ಮಾಯವಾಯಿತು. ಮಯನ ಶಿಲ್ಪವಿದ್ಯೆಯು ಯಂತ್ರಸೃಷ್ಟಿಯನ್ನು ಬಿಟ್ಟು, ಸ್ತೂಪನಿರ್ಮಾಣದಲ್ಲಿ ವ್ಯರ್ಥವಾಗುತ್ತಿದೆ. ನಿಮ್ಮ ಅರ್ಥಬಲವು ಕುಗ್ಗಿತು; ಸಮಾಜದ ಬಿಗುಹು ಕಳಚಿತು; ಜನರ ಆರೋಗ್ಯವು ನಷ್ಟವಾಯಿತು; ಆಹಾರವು ಕಡಿಮೆಯಾಯಿತು. ಪ್ರವೃತ್ತಿಮಾರ್ಗವನ್ನು ನಿವೃತ್ತಿಮಾರ್ಗವು ಓಡಿಸಿತು. ಉಪನಿಷನ್ಮತವು ನಾಸ್ತಿಕವಾದ ಬೌದ್ಧಮತವಾಗಿ ಪರಿಣಮಿಸಿತು. ನಿಮ್ಮ ಮೂರು ನಗರಗಳವರೂ ಒಬ್ಬರು

ಮತ್ತೊಬ್ಬರನ್ನು ನಾಶಮಾಡಲು ಹವಣಿಸುತ್ತಿರುವರು. ಅವರು ಒಂದಾಗಿ ಸಂಘಸಿದ್ದೇ ಆದರೆ ನಿಮ್ಮ ರಾಜ್ಯದ! ಆಯಕಟ್ಟು ಒಡೆದು ಹೋಗಿ, ಶತ್ರುಗಳಿಂದ ನೀವು ಒಂದೇ ಪೆಟ್ಟಿಗೆ ದಗ್ಧರಾಗುತ್ತೀರಿ.

**ವಿದ್ಯು:**— ಈ ಕ್ಷೀಣತೆಯು ನನಗೂ ಗೊತ್ತಾಗಿದೆ. ಅದಕ್ಕೆ ಪರಿಹಾರವೇನಾದರೂ ಇದೆಯೋ ?

**ಶುಕ್ರ:**— ಈಗಲೂ ನನ್ನ ಮಾತಿನಂತೆ ನಡೆದುಕೊಂಡರೆ ನೀವು ವಿಪತ್ತಿನಿಂದ ಪಾರಾಗಬಹುದು.

**ತಾರಕ:**— ಧರ್ಮವಿರುದ್ಧವಾದ ನಿಮ್ಮ ಕುಟಿಲರಾಜನೀತಿಯು ನನಗೆ ಸಹಿಸದು.

**ಶುಕ್ರ:**— ಕುಟಿಲವಾದ ವಿಷ್ಣುಮಾಯೆಯಿಂದ ಮೋಸಹೋಗಿರುವ ನೀವು, ನನ್ನ ಮಾತಿನಂತೆ ನಡೆಯುವುದು ಸಾಧ್ಯವೇ ?

**ವಿದ್ಯು:**— ವಿದ್ಯಾನಿಧಿಗಳಾದ ನಮ್ಮಲ್ಲಿ ವಿಷ್ಣುವಿನ ವಂಚನೆಗಳು ನಡೆಯುವವು, ಅವನಿಗೆ ಒಂದು ಸ್ಥಿರವಾದ ಸ್ಥಾನವಿಲ್ಲವೆಂದು ಹೇಳುತ್ತಾರೆ. ನೀವು ಅವನಿರುವ ಸ್ಥಳವನ್ನು ತೋರಿಸಿದರೆ, ಸ್ವರ್ಗವನ್ನು ನಾರಗೆಡಿಸಿ, ಕೈಲಾಸವನ್ನು ಕಲ್ಲುಗುತ್ತವನ್ನಾಗಿ ಮಾಡಿದಂತೆ, ನಾವು ವಿಷ್ಣುಪದವನ್ನೂ ಶೂನ್ಯವಾದ ಆಕಾಶವನ್ನಾಗಿ ಮಾಡುತ್ತೇವೆ.

**ಶುಕ್ರ:**— ಹರಿಯು ಗೌರಿಯ ಜತೆಯಲ್ಲಿ ಬಂದು ನಿಮ್ಮ ರಾಜ್ಯದಲ್ಲಿಯೇ ನೆಲಸಿ ನಿಮ್ಮನ್ನು ಹಾಳುಮಾಡಿರುವನು. ತ್ರಿಪುರವು ಹರಿಯಸ್ಥಾನವಾಗಿ ಪರಿಣಮಿಸಿದೆ.

**ತಾರಕ:**— ಹರಿಯು ನಮ್ಮ ನಗರಿಯಲ್ಲಿರುವನೇ ! ಏನು ಮಾತು !

**ಕಮಲ:**— ಅವನ ಗುರುತು ಹೇಳಿ, ನೋಡೋಣ !

**ಶುಕ್ರ:**— ಮೂಢರೇ ಕೇಳಿ. ನಿಮ್ಮ ಬುದ್ಧಮುನಿಯು ವಿಷ್ಣುವು. ಸ್ತ್ರೀನಿರ್ವಾಣ ದೀಕ್ಷೆಯ ಅಶ್ವತ್ಥವೃಕ್ಷವೂ ನಾರಾಯಣನೇ. ಅವನ ಆಲಿಂಗನದಿಂದ ನಿಮ್ಮ ಸ್ತ್ರೀಯರ ಪಾತಿವ್ರತ್ಯವನ್ನು ಹೀರಿದನು. ಮೋಹಿನಿಯೂ ಮಹಾಮಾಯೆಯೂ ಸುರಭಿಯೂ ಹರಿಯ ಅವತಾರಗಳೇ. ಸುರಭಿಯ ವತ್ಸವು ಬ್ರಹ್ಮನು. ಸುರಭಿಯು ಅಮೃತವಾಪಿಯನ್ನು

ಬಿತ್ತಿಸಿ, ನಿಮ್ಮ ವೈದ್ಯಶಕ್ತಿಯನ್ನು ನಾಶಮಾಡಿತು. ಹರಿಮಾಯೆಯಿಂದ ನೀವು ಗೋಕ್ಷೀರವೇ ಅಮೃತವೆಂದೂ ಸಗಣಿಯೇ ಸಂಜೀವನವೆಂದೂ ಬಗೆದು, ಗೋಮಾಂಸಸೇವನೆಯನ್ನು ಬಿಟ್ಟು ಗೋಸೇವೆಯಲ್ಲಿ ನಿರತರಾದಿರಿ.

**ಕಮಲ:**— ಗುರುಗಳೇ, ನಿಮಗೆ ಯುಗಯುಗಾಂತರಗಳಿಂದಲೂ ಹರಿಯಿಂದ ಸೋಲಾಗಿ ಅವನ ಹುಚ್ಚು ಹಿಡಿದಿರಬೇಕು. ಇಲ್ಲದಿದ್ದರೆ ವೇದಿಯಲ್ಲಿ ಕಂಡ ಮರ, ಪಶು, ಸ್ತ್ರೀ, ಪುರುಷರನ್ನೆಲ್ಲಾ ಹರಿಯೆಂದು ನೀವು ತಿಳಿಯುತ್ತಿರಲಿಲ್ಲ. ಹರಿಯು ನಿಮ್ಮನ್ನು ಪಿಶಾಚದಂತೆ ಆಕ್ರಮಿಸಿರಬೇಕು.

**ಶುಕ್ರ:**— (ರೋಷಗೊಂಡು) ಭ್ರಷ್ಟರೇ, ಇನ್ನು ನಿಮ್ಮ ಮಾತಿಗೆ ನಾನು ಬರುವುದಿಲ್ಲ. ನನ್ನ ಗ್ರಹಾಲಯಕ್ಕೆ ಹೋಗುತ್ತೇನೆ. ನನ್ನ ರಾಜನೀತಿಯು ಭೂಲೋಕದಲ್ಲಿ ಹರಡುವಂತೆ ಮಾಡಿ, ಮನುಷ್ಯರನ್ನಾದರೂ ಉದ್ಧರಿಸುತ್ತೇನೆ. ಇನ್ನು ಶೀಘ್ರದಲ್ಲಿಯೇ ಹರಿಯು, ಶರಾವತಾರದಿಂದ ಶಿವನ ಮೂಲಕ ತ್ರಿಪುರವನ್ನು ದಹಿಸಿಬಿಡುವನು. (ಹೋಗುವನು)

**ತಾರಕ:**— ಶುಕ್ರನೀತಿಯು ಧರ್ಮವಿರುದ್ಧವಾಗಿ ಅತಿನಿಂದ್ಯವಾಗಿರುವುದು. ನಾನು ಧರ್ಮಚಕ್ರಪ್ರವರ್ತನೆಯನ್ನು ಕೈಕೊಂಡಿದ್ದೇನೆ. ನಮ್ಮ ರಾಜ್ಯದ ಸಕಲಭಾಗಗಳಲ್ಲೂ ಧರ್ಮಬೋಧೆಗಾಗಿ ಶಿಲಾಶಾಸನಗಳನ್ನು ಹಾಕಿಸಿ, ಪವಿತ್ರವಾದ ಬುದ್ಧಧರ್ಮವನ್ನು ಸರ್ವತ್ರ ಹರಡಲು ಪ್ರಚಾರಕರನ್ನು ಕಳುಹಿಸುತ್ತೇನೆ.

**ವಿದ್ಯು:**— ನೀನು ಏನು ಬೇಕಾದರೂ ಮಾಡುತ್ತೀಯಂತೆ. ಮೊದಲು ಶತ್ರುಬಾಧೆಯನ್ನು ಪರಿಹರಿಸಲು ಪ್ರಯತ್ನಪಡು.

**ತಾರಕ:**— ಯುದ್ಧವು ನನ್ನ ಅಹಿಂಸಾವ್ರತಕ್ಕೆ ವಿರುದ್ಧವಾದುದು.

**ಕಮಲ:**— ಹಾಗಾದರೆ ಈಗ ಏನು ಮಾಡುತ್ತೀ?

**ತಾರಕ:**— ಶತ್ರುವಿಗೆ ಸಂಧಿಗಾಗಿ ಹೇಳಿ ಕಳುಹಿಸೋಣ. ಶಿವನು ಅನಾದಿಯಾಗಿ ನಮ್ಮ ಕುಲದೈವವೇ ಆಗಿರುವನು. ಬ್ರಹ್ಮನು ನಮಗೆ

ಬೇಕಾದವನು. ನಾವು ಪಾರ್ವತಿಯನ್ನು ಒಲಿಸಿಕೊಂಡು ನಿನಗೆ ಒಪ್ಪಿಸಿ, ಸಂಧಿಯ ಪ್ರಸ್ತಾಪವನ್ನು ತೆಗೆಯೋಣ.

**ವಿದ್ಯು**:-- ಅಗ್ರಜಾ, ಇದು ನನಗೆ ಸಮ್ಮತವಿಲ್ಲ.

**ಕಮಲ**:-- ನನಗೂ ಸಮ್ಮತವಿಲ್ಲ.

**ತಾರಕ**:--ಈ ಮಾರ್ಗವನ್ನು ಬಿಟ್ಟರೆ ಈಗ ಬೇರೆ ಉಪಾಯವಿಲ್ಲ.

**ವಿದ್ಯು**:-- ನೀನು ಏನು ಬೇಕಾದರೂ ಮಾಡಿಕೋ. ನಾವು ಹೋಗುತ್ತೇವೆ. ( ಹೋಗುವರು. )

———

## ಸಪ್ತಮ ಚಿತ್ರ

**ಸ್ಥಳ—** ಯುದ್ಧರಂಗ. ಶಿವನೂ ಇಂದ್ರನೂ ಮಾತನಾಡುತ್ತಿರುವರು.

**ಇಂದ್ರ:—**ಪ್ರಭೋ, ಅಸುರಮಾಯೆಯು ಏನು ಅದ್ಭುತವಾಗಿದೆ! ಅಸುರರಿಗೆ ಧರ್ಮಬಲ ನಷ್ಟವಾಯಿತು, ವಿದ್ಯಾಶಕ್ತಿ ಉಡುಗಿತು, ರಾಜನೀತಿಬಲವು ತಪ್ಪಿತು, ಯಂತ್ರಸಹಾಯ ಕುಗ್ಗಿತು, ವೈದ್ಯಶಕ್ತಿ ಹೋಯಿತು, ಕ್ಷಾತ್ರವು ಮಾಯವಾಯಿತು, ಭೂಲೋಕವು ಕೈತಪ್ಪಿತು. ಇಷ್ಟಾದರೂ ತ್ರಿಪುರಗಳು ಒಂದಾಗಿ ಸೇರಲಿಲ್ಲ; ಅಸುರರು ನಮ್ಮ ವಿಶ್ವರಥವನ್ನೂ ನಿನ್ನ ಪಾಶುಪತಾಸ್ತ್ರವನ್ನೂ ಸಡ್ಡೆಮಾಡದೆ ನಡೆಯು ತ್ತಿರುವರು. ಏನು ಆಶ್ಚರ್ಯ!

**ಶಿವ:—** ದೇವರಾಜ, ಇನ್ನೇನು! ಅವರು ನಮಗೆ ಶರಣಾಗತರಾಗು ವುದರಲ್ಲಿ ಸಂಶಯವಿಲ್ಲ. ನನ್ನ ಸತಿಯು ಅವರ ಮಧ್ಯೆ ಸಿಕ್ಕಿರುವಳು. ಮೊದಲು ಅವಳನ್ನು ರಕ್ಷಿಸದಿದ್ದರೆ ತೀರದು

(ಮಯನ ಪ್ರವೇಶ)

**ಮಯ:—** ತ್ರಿಪುರಾರಿಯೇ, ನಮ್ಮ ಅರಸು ನಿನ್ನೊಡನೆ ಸಂಧಿ ಯನ್ನಪೇಕ್ಷಿಸುತ್ತಿರುವನು.

**ಶಿವ:—** ನನ್ನ ಸತಿಯನ್ನು ಅಪಹರಿಸಿದ ಈ ನೀಚರೊಡನೆ ಸಂಧಿಯೇ? ಅವರನ್ನೂ ಅವರ ಪುರಗಳನ್ನೂ ದಹಿಸದಿದ್ದರೆ ನನ್ನ ಕೋಪವು ಶಾಂತವಾಗುವುದಿಲ್ಲ.

**ಇಂದ್ರ:—** ನೀನು ಹಾಗೆ ಮಾಡದಿದ್ದರೆ ನಾವು ನೆಮ್ಮದಿಯಾಗಿ ಇರಲಾಗುವುದಿಲ್ಲ.

**ಮಯ:**— ಶಂಭೋ, ಶಂಕರ, ನೀನು ನಮ್ಮಲ್ಲಿ ಕೋಪವನ್ನು ಬಿಟ್ಟು ಪ್ರಸನ್ನನಾಗು. ನಮ್ಮ ರಾಜಕುಮಾರರು ಕಾಲಪ್ರಚೋದಿತರಾಗಿ ನಿನ್ನ ಸತಿಯನ್ನು ಸೆರೆಹಿಡಿಯದಿದ್ದರೆ, ವಿಷ್ಣುವು ಮಾಯೆಯಿಂದ ಅವರ ನಗರಗಳನ್ನು ಒಳಹೊಕ್ಕು, ಕ್ಷೀಣತೆಯನ್ನು ಕಲ್ಪಿಸಲಾಗುತ್ತಿರಲಿಲ್ಲ. ನಿನ್ನ ಸತಿಯ ಅಪಹರಣವನ್ನು ನೀನು ವಿರೋಧಭಕ್ತಿಯ ಉಪಚಾರ ವಂತೆ ಭಾವಿಸಬೇಕೆಂದು ಪ್ರಾರ್ಥಿಸುತ್ತೇನೆ. ಆದಿಯಿಂದಲೂ ಅಸುರರು ನಿನ್ನ ಆಶ್ರಿತರು. ಅಸುರರು ಈಗಿನ ದೇವತೆಗಳಿಗೆ ಹಿಂದೆ ದೇವತಾಧಿಕಾರ ವನ್ನು ಪಡೆದು, ಪೂರ್ವದೇವರೆಂದು ಪ್ರಸಿದ್ಧರಾಗಿದ್ದರು. ಈಗಿನ ದೇವತೆ ಗಳು ಇಂದ್ರಾಗ್ನಿಗಳ ನೇತೃತ್ವದಲ್ಲಿ ಅಸುರರನ್ನು ಪದಚ್ಯುತರನ್ನಾಗಿಮಾಡಿ ಅವರ ಆಜನ್ಮವೈರಿಗಳಾಗಿರುವರು. ಈ ಸುರರು ಇದುವರೆಗೂ ನಿನ್ನಲ್ಲಿ ಉಪೇಕ್ಷೆಯಿಂದ ಇದ್ದರು. ಹೀಗಿದ್ದರೂ ನೀನು ನಿಷ್ಕಾರಣವಾಗಿ ನಿನ್ನ ಪೂರ್ವಾಶ್ರಿತರಾದ ಅಸುರರನ್ನು ಪರಿತ್ಯಜಿಸಿ, ಅವರ ವೈರಿಗಳನ್ನು ಅನು ಗ್ರಹಿಸಿದ್ದಕ್ಕೆ ಸಹಿಸದೆ, ನಿನ್ನನ್ನು ತಮ್ಮ ಪಕ್ಷಕ್ಕೆ ಬರಮಾಡಿಕೊಳ್ಳುವ ಸಲುವಾಗಿ ನಿನ್ನ ಸತಿಯನ್ನು ಕರೆದುಕೊಂಡು ಬಂದರೇ ಹೊರತು ಮತ್ತೇನೂ ಅಲ್ಲ. ನೀನು ಅವರ ಭಾವಶುದ್ಧಿಯನ್ನು ನೋಡಿ ಅವರ ಕೃತ್ಯವನ್ನು ಮನ್ನಿಸು.

**ಇಂದ್ರ:**— ಮಯನೇ, ನೀನು ಪೂರ್ವವನ್ನೆತ್ತಿ ನಮಗೂ ಶಿವ ನಿಗೂ ಭೇದವನ್ನು ಕಲ್ಪಿಸಲು ಉದ್ದೇಶಿಸಿರುತ್ತಿ. ಈಗ ಪಶುಪತಿಯು ನಮಗೆ ಸ್ವಾಮಿಯು. ಆತನ ಸತಿಯು ನಮಗೆ ಮಾತೃಪ್ರಾಯಳಾಗಿ ರುವಳು. ಅವಳಿಗೆ ನೀವು ಎಸಗಿದ ದ್ರೋಹವನ್ನು ನಾವಾಗಲಿ ಶಿವ ನಾಗಲಿ ಎಂದಿಗೂ ಮನ್ನಿಸಲಾರೆವು.

**ಮಯ:**— ಅಸುರರು ಆಕೆಯ ವಿಷಯದಲ್ಲಿ ಎಷ್ಟುಮಾತ್ರವೂ ಅಮರ್ಯಾದೆಯಿಂದ ನಡೆದುಕೊಂಡಿಲ್ಲ. ಈಗ ಆಕೆಯು ಅಸುರರಿಗೂ ನರ ರಿಗೂ ಹೊಸದೊಂದು ಮತವನ್ನು ಅನುಗ್ರಹಿಸಿ 'ದೇವೀತ್ರಿಪುರಸುಂದರಿ' ಎಂದು ಸರ್ವಪೂಜ್ಯಳಾಗಿರುವಳು. ಇಂದ್ರನೇ, ನೀನು ಆಕೆಯನ್ನು ದೇವಮಾತೆ ಎಂದು ಭಾವಿಸುವುದು ಅವಳಿಗೆ ಬಹು ದೊಡ್ಡ ಮರ್ಯಾದೆ ಯೆಂದು ಹೇಳುತ್ತಿರುವೆ. ಆದರೆ ನಾವು ಅವಳನ್ನು ಜಗನ್ಮಾತೆಯನ್ನಾಗಿ ಮಾಡಿಬಿಟ್ಟಿದ್ದೇವೆ. ಆಕೆಯಿಂದ ಉಪದಿಷ್ಟರಾದ ನೂತನ ಮತಾವಲಂಬಿ

ಗಳೆಲ್ಲರೂ ಆವಳು ಪರಶಿವನಿಗಿಂತಲೂ ಶ್ರೇಷ್ಠಳೆಂದು ಎಣಿಸಿರುವರು. ಆಕೆಯು ಕೈಲಾಸದಲ್ಲಿಯೇ ಕೊಳೆಯುತ್ತಿದ್ದರೆ ಎಂದಿಗೂ ಜಗದಂಬೆ ಯಾಗುತ್ತಿರಲಿಲ್ಲ.

**ಶಿವ:—** ಮನೆಯಿಂದ ಹೊರಕ್ಕೆ ಹೊರಡದೆ, ಗೃಹಕಾರ್ಯವೇ ಜೀವನಸರ್ವಸ್ವವೆಂದು ಭಾವಿಸತಕ್ಕ ಸ್ತ್ರೀಸಮೂಹಕ್ಕೆ ಗೌರೀದೇವಿಯು ಆದರ್ಶಪ್ರಾಯಳಾಗಿದ್ದಳು. 'ಸ್ತ್ರೀಯು ಗಂಡಸಿಗೆ ಸಮಾನಕಕ್ಷ್ಯೆಯಿಂದ' ಸ್ವತಂತ್ರವಾಗಿ ಲೋಕೋದ್ಧಾರಕಾರ್ಯದಲ್ಲಿ ನಿರತಳಾಗುವುದು ಆವಶ್ಯಕ, ಎಂಬ ಮತವನ್ನು ದೇವಿಯು ಅಸುರಾಪಹರಣವ್ಯಾಜದಿಂದ ಲೋಕಕ್ಕೆ ಕಲಿಸಿರುವಳು. ಮಯನೇ, ಈಗ ದೇವಿಯು ಎಲ್ಲಿರುವಳು?

**ಮಯ:—** ನಮ್ಮ ರಾಜನ ಪ್ರಾರ್ಥನೆಯ ಮೇರೆಗೆ ಆಕೆಯು ನಿನ್ನ ಬಳಿಗೆ ಬರುತ್ತಿರುವಳು.

(ತ್ರಿಪುರಸುಂದರಿಯ ಪ್ರವೇಶ)

**ಇಂದ್ರ:—** ಜಗನ್ಮಾತೆ, ವಂದಿಸುವೆನು. ದೇವಕುಲವನ್ನೂ ನಿನ್ನ ಭಕ್ತವರ್ಗದಲ್ಲಿ ಸೇರಿಸಿಕೊಂಡು ಉದ್ಧರಿಸಬೇಕೆಂದು ಬೇಡುತ್ತೇನೆ.

**ಪಾರ್ವತಿ:—** ಹಾಗಾದರೆ ನೀವು ನನ್ನ ಭಕ್ತರಾಗತಕ್ಕ ಅಸುರ ರಲ್ಲಿ ವೈರವನ್ನು ಬಿಡಬೇಕಾಗುವುದು.

**ಇಂದ್ರ:—** ಅನಾದಿಯಾದ ಜಾತಿಸಂಪ್ರದಾಯವನ್ನೂ ಜನ್ಮ ವೈರವನ್ನೂ ಹೇಗೆ ಬಿಡಲಾದೀತು, ಮಾತೆಯೇ?

**ಪಾರ್ವತಿ:—** ನನ್ನ ಭಕ್ತರಲ್ಲಿ ಜಾತಿ-ಕುಲ-ಮತ-ಗೋತ್ರ ಮೊದ ಲಾದ ಭೇದಗಳಾವುವೂ ಇರಕೂಡದು. ಸ್ತ್ರೀಪುರುಷರು ಸಹ ಸಮಾನ ವಾಗಿ ವರ್ತಿಸಬೇಕು. ಇದು ನನ್ನ ಆಜ್ಞೆಯು. ಇದನ್ನು ಮೀರತಕ್ಕ ವರು ನನ್ನ ವೈರಿಗಳಾಗುವರು.

**ಶಿವ:—** ದೇವಿಯ ಅಭಿಪ್ರಾಯವು ನನಗೂ ಸಮ್ಮತವಾಗಿದೆ. ದೇವಿಯೇ, ಈ ಅಸುರರ ವಿಷಯದಲ್ಲಿ ನಿನ್ನ ಅಭಿಮತವೇನು?

**ಪಾರ್ವತಿ:—** ದೇವ, ಅಸುರರು ಹರಿಮಾಯೆಯಿಂದ ವಂಚಿತ ರಾಗಿ ಕಂಗೆಟ್ಟು, ನಮ್ಮ ಕರುಣೆಗೆ ಯೋಗ್ಯಪಾತ್ರರಾಗಿರುವರು. ಆದರೆ ಅವರ ಮನಸ್ಸು ಮಾತ್ರ ಇನ್ನೂ ಭಕ್ತಿಮಾರ್ಗಕ್ಕೆ ತಕ್ಕಷ್ಟು ಪಕ್ವವಾಗಿಲ್ಲ.

**ಮಯ:**— ದೇವಿ, ಇದೇನು ಹೀಗೆ ಹೇಳುತ್ತಿ? ನಮ್ಮ ಕುಲದಲ್ಲಿ ಬಹುಮಂದಿ ನಿನ್ನ ಭಕ್ತರಾಗಿಲ್ಲವೇ?

**ಪಾರ್ವತಿ:**— ರಜತ ಲೋಹನಗರಿಗಳ ಅಸುರರು, ಯಾವ ಬಗೆಯಾದ ಮತಾವಲಂಬನೆಗೂ ಅನರ್ಹರಾಗಿ ಕ್ಷೀಣತೆಯನ್ನು ಪಡೆದಿರುವರು. ಸುವರ್ಣನಗರಿಯಲ್ಲಿ ಎಲ್ಲೋ ಕೆಲವು ಮಂದಿ ಪಾಮರರು ಮಾತ್ರ ಶಾಕ್ತಮತವನ್ನು ಆಶ್ರಯಿಸಿರುವರು. ಉಳಿದವರೆಲ್ಲರೂ ಬೌದ್ಧರಾಗಿ ಭಕ್ತಿಗೆ ಅಸಮ್ಮತರಾಗಿರುವರು. ಉತ್ತಮರೆಲ್ಲರೂ ನನ್ನ ಮತವನ್ನು ಪರಿಗ್ರಹಿಸಲು ಬಂದಿಲ್ಲ.

**ಮಯ:**— ಸ್ವಯಂ ನಮ್ಮ ಮಹಾರಾಜನೇ ಈಗ ನಿನ್ನನ್ನು ಆಶ್ರಯಿಸಿಲ್ಲವೇ?

**ಪಾರ್ವತಿ:**— ಶಿವನಿಗೂ ತನಗೂ ಮೈತ್ರಿಯನ್ನುಂಟುಮಾಡಿಸುವ ಸಲುವಾಗಿ, ತಾರಕಾಕ್ಷನು ನನ್ನನ್ನು ಆಶ್ರಯಮಾಡಿದನೇ ಹೊರತು ಭಕ್ತಿಯಿಂದ ಅಲ್ಲ. ಪರಮಬೌದ್ಧನಾದ ತಾರಕಾಕ್ಷನು ಅನನ್ಯವಾಗಿ ನನ್ನ ಮತವನ್ನು ಪರಿಗ್ರಹಿಸಲು ಒಪ್ಪನು. ಕೇವಲ ನನ್ನ ಸಹಾಯ ಸಂಪ್ರಾಪ್ತಿಗೋಸ್ಕರ ತನ್ನ ಬೌದ್ಧಮತವನ್ನು ಬಿಡದೆ ಅದಕ್ಕೆ ನನ್ನ ಶಾಕ್ತಮತವನ್ನೂ ಶೈವಮತವನ್ನೂ ಸಾಧ್ಯವಾದಷ್ಟು ದೂರದ ಅಂಗವನ್ನಾಗಿ ಸೇರಿಸಿಕೊಂಡು ಪರಿಗ್ರಹಿಸಲು ಒಪ್ಪಿರುವನು.

**ಶಿವ:**— ನಮ್ಮ ಭಕ್ತನಾಗಲು ಒಪ್ಪದವನು ನಮಗೆ ವೈರಿಯೇ ಸರಿ. ಅವನೊಡನೆ ಸಂಧಿ ಹೇಗಾದೀತು?

**ಪಾರ್ವತಿ:**— ತಾರಕಾಕ್ಷನು ಬುದ್ಧಮುನಿಯ ಉಪದೇಶದಿಂದ, ಈಗ ಸರ್ವರಲ್ಲೂ ಮೈತ್ರಿಯನ್ನು ತೋರಿಸುತ್ತ ಮೈತ್ರೇಯನೆನ್ನಿಸಿಕೊಂಡಿರುವನು. ಅರ್ಧದೂರ ಈಗ ಅವನು ನಮ್ಮ ಪಕ್ಷಕ್ಕೂ ಬಂದಿರುವನು. ಬಲಾತ್ಕಾರ ಮಾಡಿದರೆ ನಮ್ಮ ಶಿಷ್ಯನೇ ಆಗುವುದರಲ್ಲಿ ಸಂಶಯವಿಲ್ಲ. ಅಂತಹವನನ್ನು ದಂಡಿಸುವುದಕ್ಕೆ ನಾನು ಒಡಂಬಡುವುದಿಲ್ಲ.

**ಶಿವ:**— ಹಾಗಾದರೆ ಯುದ್ಧಮುಖೇನ ಅವನನ್ನು ಬಲಾತ್ಕರಿಸೋಣ. ಮಯನೇ, ನಿನ್ನ ರಾಜನು ನನಗೆ ಶರಣಾಗತನಾದರೆ ಅವನನ್ನು ಜೀವಸಹಿತ ಉಳುಹುತ್ತೇನೆ.

**ಇಂದ್ರ:—** ಪ್ರಭೋ, ತ್ರಿಪುರನಾಶನ ಪ್ರತಿಜ್ಞೆಯನ್ನು ನೀನು ಹೇಗೆ ಪೂರೈಸುತ್ತಿ?

**ಮಯ:—** ಅಸುರರಿಗೂ ಅಮರರಾದ ಆತ್ಮವುಂಟು. ಅದನ್ನು ನೀವು ನಾಶಮಾಡಲಾರಿರಿ. ನಿಮ್ಮ ಕೈಯಲ್ಲಾಗುವುದೆಂದರೆ ಅವರ ಸ್ಥಳ-ಸ್ಥಿತಿ-ಗತಿಗಳಲ್ಲಿ ವ್ಯತ್ಯಾಸವನ್ನು ಕಲ್ಪಿಸುವುದು ಮಾತ್ರವಾಗಿದೆ.

**ಇಂದ್ರ:—** ಅದು ನಿಜ. ಪಶುಪತಿಯೇ, ನೀನು ಇವರ ಪುರಗಳನ್ನು ನಾಶ ಮಾಡಿ, ಇವರಿಗೆ ನಿತ್ಯನರಕವನ್ನು ವಿಧಿಸಬೇಕೆಂದು ಬೇಡುತ್ತೇನೆ.

**ಮಯ:—** ಮಹೇಶ, ನಿನ್ನ ಸಂಕಲ್ಪವನ್ನು ನನ್ನ ಮಹಾರಾಜನಿಗೆ ತಿಳಿಸುತ್ತೇನೆ. (ಹೋಗುವನು)

(ನಂದೀಶ್ವರನ ಪ್ರವೇಶ)

**ನಂದಿ:—** ಪ್ರಭೋ, ತ್ರಿಪುರಗಳು ಒಂದಾಗಿ ಸೇರಿವೆ!

**ಇಂದ್ರ:—** ಅವು ಇಷ್ಟು ಶೀಘ್ರದಲ್ಲಿ ಹೇಗೆ ಸೇರಿದುವು?

**ನಂದಿ:—** ಅಸುರರಾಜ್ಯದಲ್ಲಿದ್ದ ಪಶುಗಳನ್ನು ಸಂರಕ್ಷಿಸಲು ನಾನು ಗುಪ್ತವೇಷದಿಂದ ಅಲ್ಲಿಗೆ ಹೋಗಿದ್ದೆನು. ಲೋಹನಗರದ ಜೀತಗಾರರು ಮಹಾಮೋಹನ ಪ್ರೇರಣೆಯಿಂದ ದಂಗೆಯೆದ್ದು, ಅಲ್ಲಿಯ ಸಕಲ ಸಂಸ್ಥೆಗಳನ್ನೂ ಭಗ್ನಮಾಡಿ, ಆ ಪುರದ ಅಸುರರನ್ನೆಲ್ಲಾ ಸದೆಬಡಿದು ರಜತನಗರಕ್ಕೋಡಿಸಿ, ಊರನ್ನು ಸೂರೆಮಾಡಿ, ತಾವು ಮೋಹಿನೀದೇವಿಯ ಪರಾಮರ್ಶೆಯಿಂದ ಭೂಲೋಕಕ್ಕೆ ತಪ್ಪಿಸಿಕೊಂಡು ಹೊರಟುಹೋದರು. ಅತ್ತ ಕಮಲಲೋಚನನು ತನ್ನ ಅಣ್ಣನ ಹುಚ್ಚಿಗೆ ಬುದ್ಧಮುನಿಯೇ ಕಾರಣನೆಂದು ಅವನನ್ನು ಕೊಲ್ಲಿಸುವುದಕ್ಕಾಗಿ ದೇವದತ್ತನೆಂಬವನ ಪರಾಮರ್ಶೆಯಿಂದ ಸ್ವರ್ಣಪುರಿಗೆ ಒಂದು ಸೇನೆಯನ್ನು ಕಳುಹಿಸಿ, ಮೋಹಿನಿಯನ್ನು ಕರೆತರಲು ಲೋಹಪುರಿಗೆ ಮತ್ತೊಂದು ಸೇನೆಯನ್ನು ಕಳುಹಿಸಿದನು. ಬೌದ್ಧಧರ್ಮಪ್ರಚಾರಕ್ಕಾಗಿ ತಾರಕಾಕ್ಷನು ಭಿಕ್ಷುಸಂಘವನ್ನು ತಮ್ಮಂದಿರ ಪುರಗಳಿಗೆ ಕಳುಹಿಸಿದನು. ಪುರದಿಂದ ಪುರಕ್ಕೆ ಕ್ಲಪ್ತ

ಸಂಖ್ಯೆಯ ಜನರು ಮಾತ್ರ ಸಂಚರಿಸಲು ಕಲ್ಪಿತವಾಗಿದ್ದ ಸೇತುವೆ ಮೊದಲಾದ ಸಾಧನಗಳು ಪುರಸಮುದಾಯಗಳೇ ಒಟ್ಟೊಟ್ಟಾಗಿ ಸಂಚರಿಸಿತೊಡಗಿಸಿದಾಗ ಸಾಲದೆಹೋದ ಪ್ರಯುಕ್ತ, ಮೂವರು ರಾಜಪುತ್ರರಿಂದಲೂ ಆಜ್ಞಪ್ತನಾದ ಮಯನು ಮೂರು ನಗರಗಳನ್ನೂ ಯಂತ್ರಸಾಧನಗಳ ಮೂಲಕ ಆಕರ್ಷಿಸಿ ಒಟ್ಟಿಗೆ ಸೇರಿಸಿಬಿಟ್ಟನು. ಈ ಮೂರು ಸಮುದಾಯಗಳ ಸಂಘರ್ಷಣೆಯಿಂದ ಅಸುರಸಮಾಜದ ವ್ಯವಸ್ಥೆಯು ಸಂಪೂರ್ಣವಾಗಿ ಒಡೆದು, ಜನರು ಪಶುಗಳಂತೆ ವ್ಯವಹರಿಸಲಾರಂಭಿಸಿರುವರು. ಈ ಗೊಂದಲದಲ್ಲಿ ನಾನು ಅಲ್ಲಿದ್ದ ಪಶುಗಳನ್ನೆಲ್ಲಾ ಭೂಲೋಕಕ್ಕೆ ಅಟ್ಟಿದೆನು. ಬಹುಮಂದಿ ಬೌದ್ಧರೂ ಶಾಕ್ತರೂ ಭೂಲೋಕಕ್ಕೆ ಓಡಿಹೋಗಿ ಮನುಷ್ಯರೊಡನೆ ಬೆರೆತಿರುವರು. ಬುದ್ಧಮುನಿಯು 'ಅಮಿತಾಭ' ಎಂಬ ಹೆಸರಿನಿಂದ ಧ್ಯಾನಿಬುದ್ಧನಾಗಿ, ಅರೂಪಸ್ವರ್ಗಲೋಕಕ್ಕೆ ಹೊರಟುಹೋದನು. ಮೋಹಿನಿಯೂ ಮಹಾಮಾಯೆಯೂ ಭೂಲೋಕದಲ್ಲಿ ಮ್ಲೇಚ್ಛಖಂಡಗಳಲ್ಲಿ ಹೋಗಿ ನೆಲಸಿರುವರು.

**ಶಿವ:**— ಹಾಗಾದರೆ ಅಸುರರು ನಮಗೆ ಶರಣಾಗತರಾಗಲು ಇಚ್ಛಿಸರೋ?

**ನಂದಿ:**— ಸ್ವಾಮಿಯೇ, ನಿನ್ನ ಬಾಣದ ಚುರುಕು ಅವರನ್ನು ಬರ ಮಾಡಿಸುವುದು. ಒಂದೇ ಪ್ರಹಾರಕ್ಕೆ ನೀನು ಅವರ ಅಹಂಕಾರ-ಮಮಕಾರದುರ್ಗಗಳನ್ನು ದಹಿಸಿಬಿಡು.

(ಬ್ರಹ್ಮನ ಪ್ರವೇಶ)

**ಬ್ರಹ್ಮ:**— ಪಶುಪತಿಯೇ, ತ್ರಿಪುರನಾಶನಕ್ಕೆ ನಾನು ಹೇಳಿದ್ದ ಸಂಧಿಯು ಬಂದಿದೆ. ನೀನು ಈಗ ಬಾಣಪ್ರಯೋಗಮಾಡು. ಇದೋ ಅಹೋರಾತ್ರಿಯೇ ತಿರುವಾಗಿ, ಸಂವತ್ಸರವೇ ಒಡಲಾಗಿರುವ ಈ ಕಾಲ-ಧನುಸ್ಸಿನಲ್ಲಿ, ವಿಷ್ಣುಮಯವಾದ ಈ ಬಾಣವನ್ನು ಪಾಶುಪತಮಂತ್ರದಿಂದಭಿಮಂತ್ರಿಸಿ ಪ್ರಯೋಗಿಸು. ಪಾಶುಪತಾಸ್ತ್ರವು ಅಸುರರನ್ನು ಪಾಶಗಳಲ್ಲಿ ಬಂಧಿಸಿ ಎಳೆದು ತರುವುದು. ಹರಿಯ ಶರಾವತಾರವು ತ್ರಿಪುರವನ್ನು ದಹಿಸಿಬಿಡುವುದು.

**ಶಿವ:**— ಇದೋ ಪ್ರಯೋಗಿಸುತ್ತೇನೆ. (ಬಾಣಪ್ರಯೋಗ.)

(ವಿಪರೀತ ಕೋಲಾಹಲ)

**ಪಾರ್ವತಿ:**— ಮಹಾದೇವ, ನಿನ್ನ ಅಸ್ತ್ರವು ಅಸುರಕುಲವನ್ನು ಮೂಗುದಾರಹಾಕಿ ಎಳೆದುಕೊಂಡು ಬರುತ್ತಿದೆ. ತ್ರಿಪುರಯಂತ್ರ ವಿಶೇಷವು ಉರಿದು ಬೇಯುತ್ತಿದೆ. ಲೋಕಾಶ್ಚರ್ಯಕರವಾದ ಅಸುರ ನಾಗರಿಕತೆಯು ನಷ್ಟವಾಯಿತು.

**ನಂದಿ:**— ಪ್ರಭೋ, ಪಾಶಬದ್ಧರಾದ ಅಸುರರನ್ನು ಏನು ಮಾಡಲಿ ?

**ಶಿವ:**—ಅಸುರ ರಾಜಪುತ್ರರನ್ನು ಮಾತ್ರ ನಮ್ಮ ಎದುರಿಗೆತಂದು ನಿಲ್ಲಿಸು.

(ನಂದಿ ಹೋಗುವನು)

**ಬ್ರಹ್ಮ:**— ತ್ರಿಪುರದ ಬೇಗೆಯು ಊರ್ಧ್ವಲೋಕಗಳನ್ನೆಲ್ಲಾ ದಹಿಸುವಂತೆ ಹಬ್ಬುತ್ತಿದೆ. ನಾನು ವಿಶ್ವರಥವನ್ನೇರಿ ಸತ್ಯಲೋಕವನ್ನು ಸೇರಿ, ಅಲ್ಲಿಂದ ಪುಷ್ಕರರೂಪವಾಗಿ ಈ ಉರಿಯನ್ನು ಅಡಗಿಸುತ್ತೇನೆ. (ರಥ ಸಹಿತ ಬ್ರಹ್ಮನು ಹೋಗುವನು.)

[ನಂದಿಯೊಡನೆ ಪಾಶಬದ್ಧರಾದ ತ್ರಿಪುರದ್ವೈಶ್ವರ ಪ್ರವೇಶ. ಮಯನೂ ಬರುವನು.]

**ನಂದಿ:**— ಪ್ರಭೋ, ತ್ರಿಪುರೇಶ್ವರರು ನಿನ್ನ ಪಾಶಬದ್ಧರಾಗಿ ಬಂದಿರುವರು.

**ತಾರಕ:**—ಪರಮೇಶ್ವರಾ,ನಿನ್ನ ಶರಘಾತದಿಂದ ನಮ್ಮ ಮನಸ್ಸು ಅಸ್ವವಸ್ಥಿತವಾಗಿದೆ. ನಮ್ಮ ವಿಷಯದಲ್ಲಿ ನಿನ್ನ ಸಂಕಲ್ಪವೇನು ?

**ನಂದಿ:**— ನೀವು ಬೌದ್ಧಮತವನ್ನು ಬಿಟ್ಟು ಶಿವ ಭವಾನಿಯರ ಭಕ್ತರಾಗಿ ಉಜ್ಜೀವಿಸಿರಿ.

**ತಾರಕ:**— ಈಗ ನನ್ನ ಮನಸ್ಸು ಶಾಂತಿಯನ್ನು ಬಯಸುತ್ತಿದೆ. ನನ್ನ ಬುದ್ಧಿಯು ತಾರುಮಾರಾಗಿದೆ. ಅದು ನೆಟ್ಟಗಾದರೆ ಅನಂತರ ಏನು ಬೇಕಾದರೂ ಮಾಡಬಹುದು.

**ಶಿವ:**—ನಿನ್ನ ಬೋಧಿಗೆ ಸತ್ವವು ಘಟಿಸಬೇಕಾದರೆ, ನೀನು ಸಂತತವಾಗಿ ಲೋಕಸೇವಾಕಾರ್ಯದಲ್ಲಿ ನಿರತನಾಗಬೇಕು.

**ಮಯ**:— ಸ್ವಾಂಬಶಿವಾ, ನೀನು ಕರುಣಾವಲೋಕಿತೇಶ್ವರನಾಗಿ ಲೋಕನೈತ್ರೀಯನಾದ ನಮ್ಮ ಮಹಾರಾಜನನ್ನು ಅನುಗ್ರಹಿಸು.

**ಶಿವ**:— ಹಾಗಾದರೆ, ತಾರಕಾಕ್ಷನು ಬೋಧಿಸತ್ವನಾಗಿ ಲೋಕ ಸೇವೆಯಲ್ಲಿ ನಿರತನಾಗಲಿ.

**ತಾರಕ**:— ಅವಲೋಕಿತೇಶ್ವರಾ, ನಿನ್ನ ಕರುಣೆಯು ಅಪಾರ ವಾದುದು.

**ಮಯ**:— ಪ್ರಭೋ, ಸುವರ್ಣನಗರದ ಅಸುರರಲ್ಲಿ ಶುದ್ಧ ಬೌದ್ಧರೂ ಶುದ್ಧಶಾಕ್ತರೂ ಆಗಿದ್ದವರೆಲ್ಲರೂ ಭೂಲೋಕಕ್ಕೆ ಓಡಿ ಹೋಗಿ, ಮನುಷ್ಯರಲ್ಲಿ ಲೀನರಾಗಿಬಿಟ್ಟಿರುವರು. ಮಿಕ್ಕುಳಿದು ನಿನಗೆ ಸೆರೆಸಿಕ್ಕಿರುವವರು, ಅಸಂಗಾಚಾರ್ಯನ ಉಪದೇಶದಂತೆ ಶಿವಬೌದ್ಧರೂ ಶಾಕ್ತಬೌದ್ಧರೂ ಆಗಿರುವರು. ನೀನು ಅವರನ್ನು ಅನುಗ್ರಹಿಸಬೇಕು.

**ಶಿವ**:— ಹಾಗಾದರೆ ಅವರೂ ಭೂಲೋಕವನ್ನು ಸೇರಿ, ಮ್ಲೇಚ್ಛ ದೇಶಗಳಲ್ಲಿ ಮನುಷ್ಯರೊಡನೆ ಬೆರೆತು ಜೀವಿಸಲಿ.

**ತಾರಕ**:— ನಿರ್ವಾಣಾ, ಅವರು ನಿನ್ನ ಕರುಣೆಯನ್ನು ಎಂದೆಂದಿಗೂ ಮರೆಯರು. ಅವರು ನಿನ್ನನ್ನು ಆದಿಬುದ್ಧನಾದ ಸ್ವಯಂಭೂನಾಥ ನೆಂದೂ, ಧ್ಯಾನಿಬುದ್ಧನಾದ ಅಮೋಘಸಿದ್ಧನೆಂದೂ, ಧ್ಯಾನಿಬೋಧಿಸತ್ವ ನಾದ ಅವಲೋಕಿತೇಶ್ವರನೆಂದೂ, ನಿನ್ನ ಸತಿಯನ್ನು ಶಕ್ತಿದೇವತೆಯಾದ ತಾರಾದೇವಿಯೆಂದೂ ಭಾವಿಸಿ ಪೂಜಿಸುವರು.

**ಮಯ**:— ಸ್ವಾಮಿಯೇ, ನೀನು ಮಿಕ್ಕ ಅಸುರರನ್ನೂ ಹೀಗೆಯೇ ಸಂರಕ್ಷಿಸು.

**ಇಂದ್ರ**:— ಪಶುಪತಿಯೇ ನಾಸ್ತಿಕರೂ ಶಠರೂ ಆದ ಅವರನ್ನು ಯಾವ ಊರ್ಧ್ವಲೋಕಗಳಲ್ಲೂ ಇರಿಸಕೂಡದು.

**ಕಮಲ**:— ಇಂದ್ರಾ, ನೀನು ಧೈರ್ಯವಾಗಿರು. ನಮ್ಮ ಪರಿ ಭವವು ಸ್ವಯಂಕೃತಾಪರಾಧದಿಂದ ಉಂಟಾಯಿತಲ್ಲದೆ, ನಿನ್ನ ಶೌರ್ಯ ದಿಂದ ಅಲ್ಲ. ಇನ್ನು ನಾವು ಯಾವ ತೇಜೋಲೋಕದಲ್ಲೂ ಮುಖ ತೋರಿಸಲಾರೆವು.

**ಶಿವ**:— ನೀವು ನಾಸ್ತಿಕ್ಯವನ್ನು ಬಿಡದಿದ್ದರೆ ಅಧೋಲೋಕಗಳಲ್ಲ

ಕೊನೆಯದಾದ ಪಾತಾಳದಲ್ಲಿ ನಿನಗೆ ನಿತ್ಯನರಕವನ್ನು ವಿಧಿಸಬೇಕಾಗು ವುದು.

**ವಿದ್ಯು:**— ನಮ್ಮ ಸ್ವಭಾವವು ವಿರೋಧಿಸದೆ ಇದ್ದರೆ ನಾವು ಆಸ್ತಿಕರಾಗಲು ಒಪ್ಪುತ್ತೇವೆ.

**ಪಾರ್ವತಿ:**-- ಮಹೇಶ್ವರಾ, ನೀನು ಇವರ ಸ್ವಭಾವಾನುಗುಣ ವಾದ ಮತಗಳನ್ನು ಅನುಗ್ರಹಿಸು.

**ಶಿವ:**— ಪಶುಪತಿಯಾಗಿ ಊರ್ಧ್ವರೇತಸ್ಕನಾಗಿರುವ ನಾನು ವಿಲಾಸಪ್ರಿಯನಾದ ಕಮಲಲೋಚನನನ್ನು ಹೇಗೆ ಅನುಗ್ರಹಿಸಲಿ?

**ಮಯ:**— ದೇವಾ, ನೀನು ವಿದ್ಯುನ್ಮಾಲಿಯನ್ನು ಅನುಗ್ರಹಿಸು. ದೇವಿಯು ಕಮಲಲೋಚನನಿಗೆ ಅನುಗ್ರಹಿಸಲಿ.

**ಶಿವ:**—ಹಾಗೆಯೇ ಆಗಲಿ. ಕರ್ಮಪ್ರಿಯನಾದ ವಿದ್ಯುನ್ಮಾಲಿಯೇ, ನಾನು ವಿತಲಲೋಕದಲ್ಲಿ, ನನ್ನ ವೀರ್ಯೋದ್ಭವವಾದ ಹಾಟಕೇಯವೆಂಬ ನದೀತೀರದಲ್ಲಿ ಹಾಟಕೇಶ್ವರನೆಂಬುದಾಗಿ ನೆಲಸಿದ್ದೇನೆ. ನೀನು ಅಲ್ಲಿ ನನ್ನನ್ನು ಭಜಿಸುತ್ತ, ಪ್ರಭುತ್ವಮಾಡಿಕೊಂಡು, ಆ ನದಿಯ ಜಲದಿಂದ ಸುವರ್ಣವನ್ನು ನಿರ್ಮಿಸುತ್ತ ಅನರ್ಘ್ಯಗಳಾದ ರಸಗಳನ್ನು ಕಲ್ಪಿಸುತ್ತ ರಸವಾದಕ್ಕೆ ಪುರಸ್ಕಾರವಿತ್ತು ಸುಖಿಸು.

**ವಿದ್ಯು:**-- ರಸೇಶ್ವರಾ, ನಾನು ಹಾಗೆಯೇ ಮಾಡುತ್ತೇನೆ.

**ಪಾರ್ವತಿ:**—ಕಮಲಲೋಚನನು ಮಯಪುತ್ರನಾದ ಬಲನೊಡನೆ ಅತಲಲೋಕದಲ್ಲಿ ಪ್ರಭುತ್ವಮಾಡಿಕೊಂಡು, ಸಕಲವಿಧವಾದ ಮಾಯಾ ಶಕ್ತಿಗಳನ್ನೂ ವಶಪಡಿಸಿಕೊಂಡು ಸುಖಿಸಲಿ. ಈ ಲೋಕದ ಸ್ತ್ರೀಯರು ಶಕ್ತ್ಯುಪಾಸಕರಾಗಿ ಪುರುಷರಿಗಿಂತಲೂ ಪ್ರಬಲರಾಗಿರುವರು. ಹಾಟಕ ವೆಂಬ ರಸವಿಶೇಷವು ಇವರ ವಶವಾಗಿದೆ. ಇದನ್ನು ಪಾನಮಾಡಿದವರಿಗೆ ಆನೆಯಂತೆ ಬಲವುಂಟಾಗುವುದು. ಕಮಲಲೋಚನನು ಈ ಸ್ತ್ರೀಯ ರನ್ನು ಆಳುತ್ತ, ಶಾಕ್ತದರ್ಶನಕ್ಕೆ ಪುರಸ್ಕಾರವಿತ್ತು ನನ್ನನ್ನು ಭಜಿಸಲಿ.

**ಕಮಲ:**— ಆದಿಮಾಯೆ, ನಾನು ತೃಪ್ತನಾದೆನು.

**ಮಯ:**— ಆದಿನಾಥ, ನನಗೆ ಇನ್ನು ನನ್ನ ಲೋಕವಾದ ತಲಾ ತಲಕ್ಕೆ ಹೋಗಲು ಅನುಜ್ಞೆಯನ್ನು ಕೊಡು.

**ನಂದಿ:**— ಸ್ವಾಮಿಯೇ, ಅಸುರರು ನಿನ್ನ ಕೈಲಾಸವನ್ನು ವಾಸಾಯೋಗ್ಯವಾಗಿ ಮಾಡಿರುವರು. ನೀನು ದೇವತೆಗಳನ್ನೂ ಅಸುರರನ್ನೂ ಅಧೋಲೋಕದವರನ್ನೂ ನಿನ್ನ ಭಕ್ತರನ್ನಾಗಿ ಮಾಡಿಕೊಂಡೆ. ದೀನರಾದ ಭೂಲೋಕದವರನ್ನು ಉದ್ಧರಿಸಲು ನೀನು ಇನ್ನು ಮುಂದೆ ಭೂಲೋಕ-ವಾಸಿಯಾಗಬೇಕೆಂದು ಪ್ರಾರ್ಥಿಸುತ್ತೇನೆ. ಮಯನನ್ನು ತಲಾತಲಕ್ಕೆ ಕಳುಹಿಸದೆ,ಭೂಮಿಯಲ್ಲಿ ನಿನಗೆ ವಸತಿಗಳನ್ನು ಕಲ್ಪಿಸಲು ನಿಯೋಜಿಸು.

**ಶಿವ:**— ಹಾಗೆಯೇ ಆಗಲಿ.

**ನಂದಿ:**— ನಿನ್ನಿಂದ ಪ್ರಯೋಗಿಸಲ್ಪಟ್ಟ ಹರಿಶರವು ತ್ರಿಪುರವನ್ನು ದಹಿಸಿ, ಮೂರು ಭಾಗವಾಗಿ ಭೂಲೋಕವನ್ನು ಹೊಕ್ಕಿರುವುದೆಂದು ಬ್ರಹ್ಮನು ತಿಳಿಸಿದನು. ಅದನ್ನು ನೀನು ಉಪಸಂಹರಿಸದಿದ್ದರೆ ಭೂಲೋಕಕ್ಕೆ ಏನಾದರೂ ತೊಂದರೆಯಾಗಬಹುದು.

**ಶಿವ:**— ಶರಾವತಾರಿಯಾದ ಹರಿಯು ಲೋಕಾನುಗ್ರಹಕ್ಕಾಗಿಯೇ ಸೌಮ್ಯನಾಗಿ ವಿಭಾಗವಾಗಿ, ಭೂಮಿಯನ್ನು ಹೊಕ್ಕಿರುವನು.

**ನಂದಿ:**— ಈ ಶರಾವತಾರದ ರಹಸ್ಯವನ್ನು ನೀನು ವಿಶದಪಡಿಸು.

**ಶಿವ:**— ಈ ಶರದ ಅಗ್ರಭಾಗವು ಊರ್ಧ್ವಸ್ವಸ್ತಿಕರೂಪವಾಗಿರುವುದು. ಮುಂದೆ ಮಯನ ಸಂತತಿಗೆ ಸೇರಿದ ಹಲವು ಮ್ಲೇಚ್ಛದೇಶಗಳವರು ಈ ರೂಪದಿಂದ ದೇವರನ್ನು ಭಜಿಸುವರು. ಶರದ ಬುಡವು ಅರ್ಧಚಂದ್ರಾಕಾರವಾಗಿರುವುದು. ಅದನ್ನು ಮತ್ತನೇಕ ಮ್ಲೇಚ್ಛದೇಶದವರು ಪೂಜಿಸುವರು. ದಂಡಾಕಾರವಾಗಿರುವ ಮಧ್ಯಭಾಗವು ಲಕುಲವೆಂದು ಪ್ರಸಿದ್ಧವಾಗಿರುವುದು. ಮುಂದೆ ಕಾಯಾರೋಹಣವೆಂಬಲ್ಲಿ ನನ್ನ ಅಂಶದಿಂದ ಹುಟ್ಟತಕ್ಕ 'ಲಕುಲೀಶ' ಎಂಬವನು ಈ ದಂಡವನ್ನು ಭಜಿಸಿ, ನನ್ನ ಪಾಶುಪತಮತವನ್ನು ಆರ್ಯಖಂಡದಲ್ಲಿ ಹರಡುವನು. ಮಯನೇ, ನೀನು ಭೂಮಿಯಲ್ಲಿ ನನಗೆ ವಸತಿಗಳನ್ನು ಕಲ್ಪಿಸಿ, ಹರಿಯ ಶರಾಗ್ರವನ್ನು ಪೂಜಿಸುತ್ತ ಜೀವಿಸುವವನಾಗು.

**ಮಯ:**— ಹಾಗೆಯೇ ಮಾಡುತ್ತೇನೆ.

**ಪಾರ್ವತಿ:**—ಅಸುರರ ಮತ್ತು ಮಾನವರ ವ್ಯವಸ್ಥೆಯಾದ ಹಾಗಾಯಿತು. ಇನ್ನು ದೇವತೆಗಳಿಗೆ ಏನು ಮಾಡುತ್ತಿ? ಸ್ವರ್ಗದ ಅಖಿಲ

ಭೋಗಸಾಮಗ್ರಿಯೂ ಕಲ್ಪವೃಕ್ಷಾದಿಗಳೂ ತ್ರಿಪುರದಲ್ಲಿ ಸಿಕ್ಕಿ ಬೆಂದು ಹೋಗಿವೆ. ಇನ್ನು ಅವರು ಶೂನ್ಯಸ್ವರ್ಗದಲ್ಲಿ ಹೇಗೆ ವಾಸಿಸಲಾಪರು ?

**ನಂದಿ:**— ಬ್ರಹ್ಮನು ವಿಶ್ವರಥವನ್ನು ಸತ್ಯಲೋಕಕ್ಕೆ ತೆಗೆದು ಕೊಂಡು ಹೋಗಿಬಿಟ್ಟನು. ದೇವತೆಗಳು ಈಗಿನ ಸ್ಥಿತಿಯಲ್ಲಿ ಅದರ ಸಹಾಯವಿಲ್ಲದೆ ಸ್ವರ್ಗಲೋಕವನ್ನು ಸೇರುವುದು ಸಹ ಪ್ರಯಾಸ ವಾಗಿದೆ.

**ಶಿವ:**— ಅವರೂ ಭೂವಾಸಿಗಳೇ ಆಗದಿದ್ದರೆ ನಿರ್ವಾಹವಿಲ್ಲ.

**ಇಂದ್ರ:**— ಪ್ರಭೋ ಇದುವರೆಗೂ ಮನುಷ್ಯರಿಗೆ ಸರ್ವಸ್ವಾಮಿ ಗಳಾಗಿದ್ದ ನಾವು ಅವರೊಡನೆ ಹೇಗೆ ವಾಸಿಸುವುದು ?

**ಪಾರ್ವತಿ:**— ಮನುಷ್ಯರು ನಮ್ಮ ಭಕ್ತರಾದರೆಂದರೆ ಅವರು ನಿಮ್ಮ ಸಮಾನರೇ ಆಗುವರು. ಇಂದ್ರಾ, ಇನ್ನು ಮುಂದೆ ನಾವೇ ಭೂಲೋಕವನ್ನು ಸಾಕ್ಷಾತ್ತಾಗಿ ಆಳಲು ಸಂಕಲ್ಪಿಸಿದ್ದೇವೆ. ನೀವು ನಶ್ವರವಾದ ಅಧಿಕಾರಾದಿ ಭೋಗಗಳಿಗೆ ವಶರಾಗದೆ, ಭಕ್ತಿಯಿಂದ ಮುಕ್ತಿಯನ್ನು ಸಾಧಿಸುವವರಾಗಿರಿ.

**ಇಂದ್ರ:**— ಮಾತೆಯೇ, ಅದಕ್ಕೆ ಇನ್ನೂ ನಮ್ಮ ಮನಸ್ಸು ಪಕ್ವ ವಾಗಿಲ್ಲ. ನಮ್ಮ ದೇವಕುಲದಲ್ಲಿ ಮನಸ್ಸು ಬಂದವರು ಮನುಷ್ಯರೊಡನೆ ನೇನರಾಗಲಿ. ಉಳಿದವರು ಮನುಷ್ಯ ಸಂಪರ್ಕಕ್ಕೆ ಅಸಾಧ್ಯವಾದ ಬಂದಸ ವಸತಿಯಲ್ಲಿದ್ದು ನಿಮ್ಮನ್ನು ಭಜಿಸುವಂತೆ ಅನುಗ್ರಹಿಸಬೇಕು.

**ಶಿವ:**— ಹಾಗಾದರೆ ನೀವು ಭೂಮಿಯಲ್ಲಿ ಉತ್ತರಧ್ರುವದಲ್ಲಿ ನೆಲಸಿರಿ. ಮಾನವಗಮನವನ್ನು ನಿರೋಧಿಸಲು ಅಲ್ಲಿನ ಶೈತ್ಯವನ್ನು ಹೆಚ್ಚಿಸುತ್ತೇನೆ.

**ಇಂದ್ರ:**— ನಿನ್ನ ಇಷ್ಟವಿದ್ದಂತಾಗಲಿ.

ಮುಗಿದುದು.

# ನಮ್ಮ ಪೋಷಕರು ಮತ್ತು ಸಹಾಯಕರು

ನಮ್ಮ ಗ್ರಂಥಮಾಲೆಗೆ ಪೋಷಕರಾಗಿಯೂ ಸಹಾಯಕರಾಗಿಯೂ ನೆರವಿತ್ತು ನಮ್ಮನ್ನು ಪ್ರೋತ್ಸಾಹಿಸಿದ್ದಕ್ಕಾಗಿ ಕೆಳಗಿನ ಮಹನೀಯರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ. ಇದರಂತೆ ಸದಭಿಮಾನಿಗಳಾದ ಕನ್ನಡಿಗರೆಲ್ಲರೂ ನಮಗೆ ಪೋಷಕರಾಗಿಯಾಗಲಿ, ಸಹಾಯಕರಾಗಿಯಾಗಲಿ, ಚಂದಾದಾರರಾಗಿಯಾಗಲಿ ಸಹಾಯಮಾಡಿ ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ.

**ಪೋಷಕರು:—**

೧. ಶ್ರೀ. ಚಂದರಗಿ ಗೋವಿಂದಪಟ್ಟಯವರು, ಧಾರವಾಡ ೧೦-೦-೦
೨. ಶ್ರೀ. ಬಳ್ಳಾರಿ ವೀರಭದ್ರಪ್ಪನವರು, ಗದಗ ೧೦-೦-೦
೩. ಶ್ರೀ. ತಿಪರಾತಿ ಗೋವಿಂದಗೌಡರು, ಉಗರಗೊಳ್ಳ ೧೦-೦-೦
೪. ಶ್ರೀ. ಸಿ. ಸಿ. ಅಬಕಾರ, ಬಸಪಟ್ಟಿ ೮-೮-೦

**ಸಹಾಯಕರು:—**

೧. ಶ್ರೀ. ಎಸ್. ಎಸ್. ಕೊಯಮುತ್ತೂರ, ರಿಟಾಯರ್ಡ ಅಸಿಸ್ಟಂಟ ಕಮೀಶನರ್, ಧಾರವಾಡ ೫-೦-೦
೨. ಪ್ರೊ. ಎಸ್. ಎಸ್. ಬಸವನಾಳ, M. A. ಕೆ. ಎಲ್. ಇ. ಆರ್ಟ್ಸ ಕಾಲೇಜ, ಬೆಳಗಾಂವ ೫-೦-೦
೩. ಶ್ರೀ. ದಾತಾರ ಬಳವಂತರಾಯರು, M. A. ವಕೀಲರು, ಬೆಳಗಾಂವ ೫-೦-೦
೪. ಡಾ. ಎಚ್. ಆರ್. ತೆರಗುಂಪಿ, M. B. B. S. ಬೆಳಗಾಂವ ೫-೦-೦
೫. ಶ್ರೀ. ನಾರಾಯಣರಾವ ಜೋಶಿ, B. A. LL. B. ವಕೀಲರು, ಬೆಳಗಾಂವ ೫-೦-೦
೬. ಶ್ರೀ. ಎಸ್. ವಿ. ಅಷ್ಟಗಿ, B. A. LL. B. ವಕೀಲರು, ಬೆಳಗಾಂವ ೫-೦-೦
೭. ಶ್ರೀ. ಮನೋಹರರಾವ ದೇಶಪಾಂಡೆ, B. A. B. T. ಅಥಣಿ ೫-೦-೦

೮. ಶ್ರೀ. ಅಶ್ವತ್ಥರಾವ ಮಹಿಷಿ, ಶಿರಹಟ್ಟಿ ೫-೦-೦
೯. ಶ್ರೀ. ಎನ್. ಆರ್. ಕುಲಕರ್ಣಿ, M. A. LL. B. ಬೈಲಹೊಂಗಲ ೫-೦-೦
೧೦. ಶ್ರೀ. ಎಂ. ಗೋವರ್ಧನರಾಯರು, ಧಾರವಾಡ ೫-೦-೦
೧೧. ಶ್ರೀ. ಕಲ್ಲಪ್ಪಾ ಸೋಮಪ್ಪಾ ಗುಂಜಾಳ, ವ್ಯಾಪಾರಿಗಳು, ಧಾರವಾಡ ೫-೦-೦
೧೨. ಶ್ರೀ. ಜಿ ಎಸ್. ಮಂಜುನಾಥಯ್ಯ, ಕಾಫೀ ಪ್ಲಾಂಟರ್, ಸುಂಟಿಕೊಪ್ಪ ಕೊಡಗು ೫-೦-೦
೧೩. ಶ್ರೀ. ಜಿ. ಜಿ. ಜೋಳಗಿ, ಭುಸಾವಳ ೫-೦-೦
೧೪. ಶ್ರೀ. ಪಿ. ಕೆ. ಎಸ್. ರಾವ್, ರಂಗೂನ ಬಸಾರ್ ೫-೦-೦
೧೫. ಪ್ರೊ. ವಿ. ಕೆ. ಗೋಕಾಕ, M. A. ಪುಣೆ ೫-೦-೦
೧೬. ಪ್ರೊ. ರಂ. ಶ್ರೀ. ಮುಗಳಿ, M. A. B. T. ಸಾಂಗ್ಲಿ ೫-೦-೦
೧೭. ಶ್ರೀ. ಪಿ. ಕೆ. ಕಡ್ಲಬಾಳ, ದಕ್ಷಿಣಾಫೆಲೊ ಕರ್ನಾಟಕ ಕಾಲೇಜ, ಧಾರವಾಡ ೫-೦-೦
೧೮. ಶ್ರೀ. ಜಿ. ಜಿ. ಹುಲಕುಂದ, B. A. LL. B. ಅಥಣಿ ೫-೦-೦
೧೯. ಶ್ರೀ. ಎಸ್. ವಿ. ಗಿಡ್ನವರ, B. A. ಚೀಫ್ ಆಫೀಸರರು ೫-೦-೦
೨೦. ಶ್ರೀ. ಅರವಿಂದ ಜೋಶಿ, B. A, ಬೆಳಗಾಂವಿ ೫-೦-೦
೨೧. ಶ್ರೀ. ಗಜೇಂದ್ರಗಡ ಶ್ಯಾಮರಾಯರು, B, A, ಬಿಜಾಪುರ ೫-೦-೦
೨೨. ಶ್ರೀ. ಕಾಮುಲಾಪುರ ಕಾಂತರಾಯರು, M, B, B, S, ಧಾರವಾಡ ೫-೦-೦
೨೩. ಶ್ರೀ. ಹೆಚ್. ವರದಾಚಾರ್ಯ, ಮುಗದ ೫-೦-೦
೨೪. ಶ್ರೀ. ಬಿ. ಎನ್. ಕುಲಕರ್ಣಿ, ಮುಗದ ೫-೦-೦
೨೫. ಶ್ರೀ. ದೇವರಮನಿ ಆನಂದರಾಯರು, ಧಾರವಾಡ ೫-೦-೦
೨೬. ಶ್ರೀ. ಲಕ್ಷ್ಮಣರಾವ ಜಿ. ಮಕ್ತಾಲಿ, ಧಾರವಾಡ ೫-೦-೦
೨೭. ಶ್ರೀ. ಗುಂಜೀಕರ ಧೀರೇಂದ್ರರಾಯರು, B. COM. ಧಾ. ೫-೦-೦
೨೮. ಶ್ರೀ. ಮಧ್ವರಾವ ಕಬ್ಬೂರ, M. A. LL. B. ಧಾರವಾಡ ೫-೦-೦